CPMG / KA / BG-GPO/13 / 2003-2005

ವಿಶ್ವಮಾನವ ವರ್ಷ



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

ಸಂಪುಟ ೧೩೯ | ಬೆಂಗಳೂರು, ಗುರುವಾರ, ಮಾರ್ಚ್ ೪, ೨೦೦೪ (ಫಾಲ್ಗುಣ ೧೪, ಶಕ ವರ್ಷ ೧೯೨೫) | ಸಂಚಿಕೆ ೧೦

## ಭಾಗ–೪–ಎ

## ರಾಜ್ಯದ ವಿಧೇಯಕಗಳ ಮತ್ತು ಅವುಗಳ ಮೇಲೆ ಪರಿಶೀಲನಾ ಸಮಿತಿಯ ವರದಿಗಳು, ರಾಜ್ಯದ ಅಧಿನಿಯಮಗಳು ಮತ್ತು ಅಧ್ಯಾದೇಶಗಳು, ಕೇಂದ್ರದ ಮತ್ತು ರಾಜ್ಯದ ಶಾಸನಗಳ ಮೇರೆಗೆ ರಾಜ್ಯ ಸರ್ಕಾರವು ಹೊರಡಿಸಿದ ಸಾಮಾನ್ಯ ಶಾಸನಬದ್ಧ ನಿಯಮಗಳು ಮತ್ತು ರಾಜ್ಯಾಂಗದ ಮೇರೆಗೆ ರಾಜ್ಯಪಾಲರು ಮಾಡಿದ ನಿಯಮಗಳು, ಹಾಗೂ ಕರ್ನಾಟಕ ಉಚ್ಚ ನ್ಯಾಯಾಲಯವು ಮಾಡಿದ ನಿಯಮಗಳು.

ಕಂದಾಯ ಸಚಿವಾಲಯ

ಅಧಿಸೂಚನೆ

**ಸಂಖ್ಯೆ: ಕಂಇ 123 ಎಲ್‌ಆರ್‌ಎಂ 2003 ಬೆಂಗಳೂರು, ದಿನಾಂಕ: 19ನೇ ನವೆಂಬರ್ 2003**

ನ್ಯಾಷನಲ್ ಎಜುಕೇಷನ್ ಫೌಂಡೇಷನ್ ಟ್ರಸ್ಟ್, ಗಾಂಧಿನಗರ, ಬೆಂಗಳೂರು ರವರು, ಬೆಂಗಳೂರು ದಕ್ಷಿಣ ತಾಲ್ಲೂಕು, ಉತ್ತರಹಳ್ಳಿ ಹೋಬಳಿ, ಹೊಸಕೆರೆ ಗ್ರಾಮದ ಸ.ನಂ. 52 ರಲ್ಲಿ 6.00 ಎಕರೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಖರೀದಿಸಲು ಮಾಡಿದ, ಬೇಡಿಕೆ ಹಾಗೂ ನಮೂನೆ 15-ಎ ಮತ್ತು 15-ಎಎ ಗಳಲ್ಲಿ ನೀಡಿದ ಮಾಹಿತಿ ಅನುಸರಿಸಿ ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ ಇವರು ತಮ್ಮ ಪತ್ರ ಸಂಖ್ಯೆ ಎಲ್‌ಆರ್‌ಎಫ್ ಸಿಆರ್ 24: 2003-04 ದಿನಾಂಕ: 9.10.2003 ರಲ್ಲಿ ಪ್ರಸ್ತಾಪಿತ ಗ್ರಾಮದ ಮೇಲ್ಕಂಡ ಸ.ನಂ.ನಲ್ಲಿ 6.00 ಎಕರೆ ಜಮೀನನ್ನು ಖರೀದಿಸಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (i) (ii) ರಡಿ ವಿನಾಯ್ತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾಪಿತ ಸಂಸ್ಥೆಯು, ಉಪನೋಂದಣಾಧಿಕಾರಿ, ಗಾಂಧಿನಗರ, ಬೆಂಗಳೂರು ರವರಲ್ಲಿ ದಿನಾಂಕ: 27.1.2000 ರಂದು ನೋಂದಾಯಿಸಲ್ಪಟ್ಟಿದೆ. ಪ್ರಸ್ತಾಪಿತ ಜಮೀನಿನ ಖಾತೆದಾರರಿಂದ ಜಮೀನನ್ನು ಖರೀದಿಸಲು ಕರಾರುಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಪಿಟಿಸಿಎಲ್ ಕಾಯ್ದೆಗೆ ಒಳಪಡುವುದಿಲ್ಲ. ಭೂ ಮಂಜೂರಾತಿ ನಿಯಮಾವಳಿ ಓಡಿಪಿ:ಸಿಡಿಪಿ ವ್ಯಾಪ್ತಿ ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಯ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (i) (ii) ರ ಪ್ರಕಾರ ಶೈಕ್ಷಣಿಕ ಉದ್ದೇಶಕ್ಕೆ 4 ಯೂನಿಟ್‌ವರೆವಿಗೆ ಜಮೀನನ್ನು ಹೊಂದಲು ಅವಕಾಶ ಕಲ್ಪಿಸಿದೆ ಈ ಪ್ರಸ್ತಾವನೆ ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ಕಾಯ್ದೆ, 1995ರ ಕಲಂ 109 (i) (ii) ಮತ್ತು ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ನಿಯಮ 1996ರ ನಿಯಮ 38ಬಿ (2) (ಎ) ಮತ್ತು (ಬಿ) ರಲ್ಲಿನ ಷರತ್ತುಗಳನ್ನು ಪೂರೈಸಿದ್ದು, ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ, ಬೆಂಗಳೂರು ದಕ್ಷಿಣ ತಾಲ್ಲೂಕು, ಉತ್ತರಹಳ್ಳಿ ಹೋಬಳಿ, ಹೊಸಕೆರೆ ಗ್ರಾಮದ ಸರ್ವೆ ನಂ.52 ರಲ್ಲಿ 6.00 ಎಕರೆ ಜಮೀನನ್ನು ನ್ಯಾಷನಲ್ ಎಜುಕೇಷನ್ ಫೌಂಡೇಷನ್ ಟ್ರಸ್ಟ್, ಗಾಂಧಿನಗರ, ಬೆಂಗಳೂರು ಇವರಿಗೆ ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (i) (ii) ರಡಿ, ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟಂತೆ ಸರ್ಕಾರದ ಅನುಮತಿ ನೀಡಲಾಗಿದೆ.

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷಗಳೊಳಗಾಗಿ ಉಪಯೋಗಿಸತಕ್ಕದ್ದು ಮತ್ತು ಆ ಬಗ್ಗೆ ಜಿಲ್ಲಾಧಿಕಾರಿಗಳ ಮುಖಾಂತರ ಸರ್ಕಾರಕ್ಕೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯ್ತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ, ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ 1956ರ ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 55 ಪೆಯಿಡ್ ಅಫ್ ಷೇರು ಬಂಡವಾಳ ಹೊಂದಿದ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರ ನಿಯಂತ್ರಿತ ಅಥವಾ ಎರಡರ ಹಿಡಿತ ಹೊಂದಿರುವ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
3. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯ್ದೆ, 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯಬೇಕು.
4. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ, ಸಿಡಿಪಿ: ಓಡಿಪಿ ವ್ಯಾಪ್ತಿಯೊಳಗೆ ಬಂದರೆ, ಅದರಂತೆ ಅನುಮತಿ ಪಡೆದು ಉಪಯೋಗಿಸತಕ್ಕದ್ದು.
5. ಮಾನ್ಯ ಉಚ್ಚನ್ಯಾಯಾಲಯದ ಮುಂದಿರುವ 9 ಎಕರೆ-38 ಗುಂಟೆ ಜಮೀನು ಸಂಸ್ಥೆಯ ಪರವಾಗಿ ತೀರ್ಮಾನವಾದಲ್ಲಿ, ಹೆಚ್ಚುವರಿಯಾದ 2 ಎಕರೆ-6 ಗುಂಟೆ ಜಮೀನನ್ನು ಖರೀದಿ ಮಾಡಬಾರದೆಂಬ ಷರತ್ತಿಗೆ ಒಳಪಟ್ಟಿರುತ್ತದೆ.
6. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯಾ ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಿಕೊಳ್ಳಲಾಗುವುದು.
7. ಈ ಅನುಮತಿಯು ಭೂ ಸುಧಾರಣೆ ಕಾಯ್ದೆ, 1961ರ ಕಲಂ 109 ರನ್ವಯ ಮಾತ್ರವಾಗಿರುತ್ತದೆ. ಬೇರೆ ಕಾನೂನುಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿ. ರಾಧಾಕೃಷ್ಣ**

ಸರ್ಕಾರದ ಅಧೀನ ಕಾರ್ಯದರ್ಶಿಗಳು,

ಕಂದಾಯ ಇಲಾಖೆ, (ಭೂ ಸುಧಾರಣೆ).

ಪಿಆರ್. 108

## DEPARTMENT OF PERSONNEL AND ADMINISTRATIVE REFORMS SECRETARIAT

## NOTIFICATION

**No: DPAR 307 SAS 2003 Bangalore dated: 6th February 2004**

Notification No. 23012/9/2003-AIS-III, dated: 5/1/2004 of Government of India, Ministry of Personnel, Public Grievances & Pensions, Dept. of Personnel and Training, New Delhi is hereby re-published.

**(TO BE PUBLISHED IN THE GAZETTE OF INDIA PART I SECTION 2)**

**No. 23012/9/2003-AIS-III**

**Government of India**

**Ministry of Personnel, P. G. & Pensions**

**(Deptt. of Personnel & Training)**

**New Delhi, the 5th Jan., 2004.**

**NOTIFICATION**

Sri B. Basavaraju, IAS (KN:88) appointed to the Indian Administrative Service on the basis of the Civil Services Examination, 1987 and borne on the cadre of Karnataka is permitted to change his name from B. Basavaraju to Basavaraju and will accordingly be recognised as Basavaraju for all official purposes.

**AQEEL AHMAD**

Deputy Secretary to the Govt. of India,

T.No.23092285

By Order and in the name of the Governor of Karnataka,

**B. V. KUMARASWAMY**

Under Secretary to Government,

DPAR (Services-1).

PR-110

## ಸಹಕಾರ ಸಚಿವಾಲಯ

## ಅಧಿಸೂಚನೆ

**ಸಂಖ್ಯೆ: ಸಿಎಂಡಬ್ಲ್ಯೂ 26 ಸಸಕಾ 2004 ಬೆಂಗಳೂರು, ದಿನಾಂಕ: 4ನೇ ಫೆಬ್ರವರಿ 2004**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 121ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಪಾಂಡವಪುರ ಸಹಕಾರಿ ಸಕ್ಕರೆ ಕಾರ್ಖಾನೆ (ನಿ), ಪಾಂಡವಪುರ ಇದಕ್ಕೆ ಅನ್ವಯವಾಗುವಂತೆ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ

ಕಲಂ 27(1)ರಿಂದ ವಿನಾಯಿತಿ ನೀಡಿ ಸದರಿ ಕಾರ್ಖಾನೆಯ 2001-02 ಮತ್ತು 2002-03ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ದಿನಾಂಕ: 30.9.2004 ರವರೆಗೆ ಮುಂದೂಡಲಾಗಿದೆ.

ಮೇಲ್ಕಂಡ ಸಕ್ಕರೆ ಕಾರ್ಖಾನೆಯ ವಾರ್ಷಿಕ ಮಹಾಸಭೆಗೆ ಸಂಬಂಧಿಸಿದಂತೆ ನ್ಯಾಯಾಲಯದ ಯಾವುದೇ ಆದೇಶವಿದ್ದಲ್ಲಿ ಈಗ ನೀಡಲಾಗುತ್ತಿರುವ ಅವಧಿ ವಿಸ್ತರಣಾ ಆದೇಶವು ಊರ್ಜಿತವಾಗುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಅಹ್ಮದ್ ಎ. ಮುಖ್ತದರ್**

ಪಿಆರ್. 112 ಸರ್ಕಾರದ ಅಧೀನ ಕಾರ್ಯದರ್ಶಿ,

ಸಹಕಾರ ಇಲಾಖೆ.

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

### ಅಧಿಸೂಚನೆ

### ಸಂಖ್ಯೆ: ವಾಕೈ 7 ರೇಉನಿ 2004 ಬೆಂಗಳೂರು, ದಿನಾಂಕ: 9ನೇ ಫೆಬ್ರವರಿ 2004

ಕರ್ನಾಟಕ ರೇಷ್ಮೆ ಕೈಗಾರಿಕಾ ನಿಗಮ ನಿಯಮಿತದ ಸಂಘ ನಿಯಮಗಳ ಅನುಚ್ಛೇದ 8(ಎ) ಪ್ರಕಾರ ನಿಗಮದ ಮಂಡಳಿಗೆ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಶ್ರೀ ಅಸಾದುಲ್ಲಾ ಖಾನ್, ತಂದೆ ಪೀರ್ ಖಾನ್ ನಂ: 167. ಮದ್ದೂರಮ್ಮ ಕಾಲೋನಿ, ವೆಟನರಿ ಆಸ್ಪತ್ರೆ ಹಿಂಭಾಗ, ನ್ಯೂ ತಾವರೆಕೆರೆ, ಬೆಂಗಳೂರು ಇವರನ್ನು ಶ್ರೀ ಆರ್. ನಾಗರಾಜ್ ಇವರ ಸ್ಥಾನದಲ್ಲಿ ನಿರ್ದೇಶಕರನ್ನಾಗಿ ನೇಮಕಾತಿ ಮಾಡಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿ. ಹರಿಹರನ್**

ಪಿಆರ್. 113 ಪೀಠಾಧಿಕಾರಿ (ರೇಷ್ಮೆ),

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

## ನಗರಾಭಿವೃದ್ಧಿ ಸಚಿವಾಲಯ

### ಅಧಿಸೂಚನೆ

### ಸಂಖ್ಯೆ: ನಅಇ 36 ಎಂಎಲ್‌ಆರ್ 2002 (A-31) ಬೆಂಗಳೂರು, ದಿನಾಂಕ: 5ನೇ ಫೆಬ್ರವರಿ 2004

ಕರ್ನಾಟಕ ಪುರಸಭೆ ಕಾಯಿದೆ 1964ರ ಪ್ರಕರಣ 11 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮಂಡ್ಯ ನಗರಸಭೆಗೆ ಈ ಕೆಳಕಂಡವರನ್ನು ತಕ್ಷಣದಿಂದ ಜಾರಿಗೆ ಬರುವಂತೆ. ಹಾಗೂ ಮುಂದಿನ ಆದೇಶದವರೆಗೆ ಸದಸ್ಯರನ್ನಾಗಿ ಸರ್ಕಾರ ನಾಮ ನಿರ್ದೇಶನ ಮಾಡಿದೆ.

1. ಶ್ರೀ ಕೆ. ರಮೇಶ ಆಚಾರ್ಯ ಹೋಟೆಲ್ ಹರಿಪ್ರಿಯದ ಮಾಲೀಕರು, ಮಂಡ್ಯ
2. ಡಾ: ಗುರುರತ್ನ, ಕ್ರಿಶ್ಚಿಯನ್ ಕಾಲೋನಿ, ಮಂಡ್ಯ
3. ಶ್ರೀ ಚಂದುಲಾಲ್, ಜೈನ್ ಸ್ಟ್ರೀಟ್, ಮಂಡ್ಯ
4. ಡಾ: ಲಿಂಗಯ್ಯ, ನಿವೃತ್ತ ಜಿಲ್ಲಾ ಆರೋಗ್ಯ ಅಧಿಕಾರಿ ಮಂಡ್ಯ

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಗದೀಶ್ ಜೋಯಿಸ್**

ಪಿಆರ್. 114 ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ.

### ಅಧಿಸೂಚನೆ

### ಸಂಖ್ಯೆ: ನಅಇ 36 ಎಂಎಲ್‌ಆರ್ 2002 (B-13) ಬೆಂಗಳೂರು, ದಿನಾಂಕ: 12ನೇ ಫೆಬ್ರವರಿ 2004

ಕರ್ನಾಟಕ ಪುರಸಭೆ ಕಾಯಿದೆ 1964ರ ಪ್ರಕರಣ 11 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಅಣ್ಣಿಗೇರಿ ಪುರಸಭೆಗೆ ಸರ್ಕಾರವು ಅಧಿಸೂಚನೆ ಸಂಖ್ಯೆ. ನ.ಅ.ಇ. 36 ಎಂ.ಎಲ್.ಆರ್. 2002 (B-13) ದಿನಾಂಕ: 2.05.2002 ರಲ್ಲಿ ಹೊರಡಿಸಿರುವ ಆದೇಶವನ್ನು ಭಾಗಶಃ ಮಾರ್ಪಡಿಸಿ ಕ್ರಮ ಸಂಖ್ಯೆ: 4 ಶ್ರೀ ಗಂಗನಗೌಡ ಕುರಹಟ್ಟಿ, ಅಣ್ಣಿಗೇರಿ ಇವರ ಸದಸ್ಯತ್ವವನ್ನು ರದ್ದುಪಡಿಸಿ ಅವರ ಬದಲಿಗೆ ಶ್ರೀ ಕಾಶಪ್ಪ ಎಸ್. ಹಾಲದೋಟರ್, ಅಣ್ಣಿಗೇರಿ ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ, ಹಾಗೂ ಮುಂದಿನ ಆದೇಶದವರೆಗೆ ಸದಸ್ಯರನ್ನಾಗಿ ಸರ್ಕಾರ ನಾಮ ನಿರ್ದೇಶನ ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಗದೀಶ್ ಜೋಯಿಸ್**

ಪಿಆರ್. 115 ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ.

## ಅಧಿಸೂಚನೆ

### ಸಂಖ್ಯೆ: ನಅಇ 36 ಎಂಎಲ್‌ಆರ್ 2002 (B-74) ಬೆಂಗಳೂರು, ದಿನಾಂಕ: 12ನೇ ಫೆಬ್ರವರಿ 2004

ಕರ್ನಾಟಕ ಪುರಸಭೆ ಕಾಯಿದೆ 1964ರ ಪ್ರಕರಣ 11 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಹೊಳೆನರಸೀಪುರ ಪುರಸಭೆಗೆ ಸರ್ಕಾರವು ಅಧಿಸೂಚನೆ ಸಂಖ್ಯೆ. ನ.ಅ.ಇ. 36 ಎಂ.ಎಲ್.ಆರ್. 2002 (B-74) ದಿನಾಂಕ: 25.07.2003 ರಲ್ಲಿ ಹೊರಡಿಸಿರುವ ಆದೇಶವನ್ನು ಭಾಗಶಃ ಮಾರ್ಪಡಿಸಿ ಕ್ರಮ ಸಂಖ್ಯೆ: 4 ಶ್ರೀ ಹೆಚ್. ಸಿ. ಸಿಂಗ್ರೀಗೌಡ ಕೋಟೆ, ಹೊಳೆನರಸೀಪುರ ಇವರ ಸದಸ್ಯತ್ವವನ್ನು ರದ್ದುಪಡಿಸಿ ಅವರ ಬದಲಿಗೆ ಶ್ರೀಮತಿ ವನಜಾಕ್ಷಿ ಕೋಂ ರಂಗೇಗೌಡ, ಹೊಳೆನರಸೀಪುರ ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ, ಹಾಗೂ ಮುಂದಿನ ಆದೇಶದವರೆಗೆ ಸದಸ್ಯರನ್ನಾಗಿ ಸರ್ಕಾರ ನಾಮ ನಿರ್ದೇಶನ ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಗದೀಶ್ ಜೋಯಿಸ್**

ಪಿಆರ್. 116

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ.

## ಅಧಿಸೂಚನೆ

### ಸಂಖ್ಯೆ: ನಅಇ 36 ಎಂಎಲ್‌ಆರ್ 2002 (C-4) ಬೆಂಗಳೂರು, ದಿನಾಂಕ: 12ನೇ ಫೆಬ್ರವರಿ 2004

ಕರ್ನಾಟಕ ಪುರಸಭೆ ಕಾಯಿದೆ 1964ರ ಪ್ರಕರಣ 11 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಬಾದಾಮಿ ಪಟ್ಟಣಪಂಚಾಯಿತಿಗೆ ಸರ್ಕಾರವು ಅಧಿಸೂಚನೆ ಸಂಖ್ಯೆ. ನ.ಅ.ಇ. 36 ಎಂ.ಎಲ್.ಆರ್. 2002 (C-4) ದಿನಾಂಕ: 02.05.2002 ರಲ್ಲಿ ಹೊರಡಿಸಿರುವ ಆದೇಶವನ್ನು ಭಾಗಶಃ ಮಾರ್ಪಡಿಸಿ ಕ್ರಮ ಸಂಖ್ಯೆ: 2 ಶ್ರೀಮತಿ ಯಲ್ಲವ್ವ ಯಲ್ಲಪ್ಪ ಮಾದರ, ಬಾದಾಮಿ ಇವರ ಸದಸ್ಯತ್ವವನ್ನು ರದ್ದುಪಡಿಸಿ ಅವರ ಬದಲಿಗೆ ಶ್ರೀಮತಿ ಶಿವವ್ವ ಅಡಿವೆಪ್ಪ ತಳವಾರ ಬಾದಾಮಿ ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ, ಹಾಗೂ ಮುಂದಿನ ಆದೇಶದವರೆಗೆ ಸದಸ್ಯರನ್ನಾಗಿ ಸರ್ಕಾರ ನಾಮ ನಿರ್ದೇಶನ ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಗದೀಶ್ ಜೋಯಿಸ್**

ಪಿಆರ್. 117

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ.

## ಅಧಿಸೂಚನೆ

### ಸಂಖ್ಯೆ: ನಅಇ 36 ಎಂಎಲ್‌ಆರ್ 2002 (C-17) ಬೆಂಗಳೂರು, ದಿನಾಂಕ: 12ನೇ ಫೆಬ್ರವರಿ 2004

ಕರ್ನಾಟಕ ಪುರಸಭೆ ಕಾಯಿದೆ 1964ರ ಪ್ರಕರಣ 11 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ರಾಯಬಾಗ್ ಪಟ್ಟಣಪಂಚಾಯಿತಿಗೆ ಸರ್ಕಾರವು ಅಧಿಸೂಚನೆ ಸಂಖ್ಯೆ. ನ.ಅ.ಇ. 36 ಎಂ.ಎಲ್.ಆರ್. 2002 (C-17) ದಿನಾಂಕ: 13.06.2002 ರಲ್ಲಿ ಹೊರಡಿಸಿರುವ ಆದೇಶವನ್ನು ಭಾಗಶಃ ಮಾರ್ಪಡಿಸಿ ಶ್ರೀ ಹಣಮಂತ ಸತ್ಯಪ್ಪ ನಾವಿ, ರಾಯಬಾಗ್ ಇವರ ಸದಸ್ಯತ್ವವನ್ನು ರದ್ದುಪಡಿಸಿ ಅವರ ಬದಲಿಗೆ ಶ್ರೀ ಅಶೋಕ ಬಸವಂತ ಸಂಕಪ್ಪಾ, ರಾಯಬಾಗ್ ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ, ಹಾಗೂ ಮುಂದಿನ ಆದೇಶದವರೆಗೆ ಸದಸ್ಯರನ್ನಾಗಿ ಸರ್ಕಾರ ನಾಮ ನಿರ್ದೇಶನ ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಗದೀಶ್ ಜೋಯಿಸ್**

ಪಿಆರ್. 118

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ.

## ತಿದ್ದುಪಡಿ

### ಸಂಖ್ಯೆ: ನಅಇ 36 ಎಂಎಲ್‌ಆರ್ 2002 (ಎ-36) ಬೆಂಗಳೂರು, ದಿನಾಂಕ: 4ನೇ ಫೆಬ್ರವರಿ 2004

ಅಧಿಸೂಚನೆ ಸಂಖ್ಯೆ: ನಅಇ 36 ಎಂಎಲ್‌ಆರ್ 2002 (ಎ-36) ದಿನಾಂಕ: 17.1.04ರ ಕ್ರ.ಸಂ. (2)ರಲ್ಲಿ ಕಾಣುವ "ಶ್ರೀಮತಿ ಓಬಳಮ್ಮ, ಗಂಡ ಪರಶುರಾಮ್, ದೇವಿ ನಗರ 1ನೇ ಅಡ್ಡರಸ್ತೆ, ಬಳ್ಳಾರಿ, ಎನ್ನುವ ಬದಲಾಗಿ "ಶ್ರೀಮತಿ ಓಬಳಮ್ಮ, ಗಂಡ ಶ್ರೀ ಹೊನ್ನೂರ ಸಾಬ್, ದೇವಿ ನಗರ, 1ನೇ ಅಡ್ಡ ರಸ್ತೆ, ಬಳ್ಳಾರಿ" ಎಂದು ತಿದ್ದುಪಡಿ ಮಾಡಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಗದೀಶ್ ಜೋಯಿಸ್**

ಪಿಆರ್. 119

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ.

## ಸಹಕಾರ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಇ 36 ಎಸಸೇ 2004 ಬೆಂಗಳೂರು, ದಿನಾಂಕ: 7ನೇ ಫೆಬ್ರವರಿ 2004**

ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 68ರ ಪ್ರಕಾರ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೈಲಹೊಂಗಲ ಉಪವಿಭಾಗ, ಬೈಲಹೊಂಗಲ ಇವರನ್ನು ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಮಲಪ್ರಭಾ ಸಹಕಾರಿ ನೂಲಿನ ಗಿರಣಿ, ಸವದತ್ತಿ ಇದರ ವ್ಯವಸ್ಥಾಪಕ ನಿರ್ದೇಶಕರ ಹುದ್ದೆಯ ಅಧಿಕ ಪ್ರಭಾರದಲ್ಲಿಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ಎಸ್. ಜಾಪಾಲಿ**

ಪಿಆರ್. 120 ಸರ್ಕಾರದ ಅಧೀನ ಕಾರ್ಯದರ್ಶಿ, ಸಹಕಾರ ಇಲಾಖೆ.

### ಅಧಿಸೂಚನೆ

**ಸಂಖ್ಯೆ: ಸಿಎಂಡಬ್ಲ್ಯೂ 256 ಸಿಎನ್ಎಸ್ 2000 ಬೆಂಗಳೂರು, ದಿನಾಂಕ: 9ನೇ ಫೆಬ್ರವರಿ 2004**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಕಲಂ 29ರ ಉಪ ಕಲಂ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಈ ಕೆಳಕಂಡ ವ್ಯಕ್ತಿಗಳನ್ನು, ಮಂಡ್ಯ ಜಿಲ್ಲೆ ಮದ್ದೂರು ತಾಲ್ಲೂಕಿನ ಚಿಕ್ಕರಸಿನಕೆರೆ ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ., ಚಿಕ್ಕರಸಿನಕೆರೆ ಇದರ ಆಡಳಿತ ಮಂಡಳಿಗೆ ಸದಸ್ಯರುಗಳನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡಿದೆ.

1. ಶ್ರೀ ಜಿ. ಬಿ. ಬೋರೇಗೌಡ ಬಿನ್ ಸಿದ್ದೇಗೌಡ ಉ: ಬುಸೀಗೌಡ, ಗುರುದೇವರಹಳ್ಳಿ
2. ಶ್ರೀಮತಿ ಸುಧಾ ಕೋಂ ಸಿ. ಎನ್. ಬಸವಲಿಂಗೇಗೌಡ, ಚಿಕ್ಕರಸಿನಕೆರೆ
3. ಶ್ರೀ ಶಿವಲಿಂಗಯ್ಯ ಬಿನ್ ಚಿಕ್ಕಪುಟ್ಟಯ್ಯ, ಚಿಕ್ಕರಸಿನಕೆರೆ

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಎಸ್. ಹುಚ್ಚಾಚಾರಿ**

ಪಿಆರ್. 121 ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

### ಅಧಿಸೂಚನೆ

**ಸಂಖ್ಯೆ: ಸಿಎಂಡಬ್ಲ್ಯೂ 12 ಸಿಎನ್ಎಸ್ 2004 ಬೆಂಗಳೂರು, ದಿನಾಂಕ: 31ನೇ ಜನವರಿ 2004**

ಈ ಹಿಂದೆ ಸರ್ಕಾರದಿಂದ ಮಾಡಿರುವ ಎಲ್ಲಾ ನಾಮನಿರ್ದೇಶನಗಳನ್ನು ರದ್ದುಪಡಿಸಿ, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಕಲಂ 29ರ ಉಪ ಕಲಂ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಈ ಕೆಳಕಂಡ ವ್ಯಕ್ತಿಗಳನ್ನು, ಉತ್ತರ ಕನ್ನಡ ಜಿಲ್ಲೆ ಹಳಿಯಾಳ ತಾಲ್ಲೂಕಿನ ಚಿಬ್ಬಲಗೇರಿ ನಾಗಶೆಟ್ಟಿ ಗ್ರೂಪ್ ಗ್ರಾಮಗಳ ಸೇವಾ ಸಹಕಾರ ಬ್ಯಾಂಕ್ ನಿ., ಇದರ ಆಡಳಿತ ಮಂಡಳಿಯ ಸದಸ್ಯರುಗಳನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡಿದೆ.

1. ಶ್ರೀ ದೇಮಾಣಿ ರಾಮಚಂದ್ರ ಶಿರೋಜಿ, ತೇಗನಳ್ಳಿ ಗ್ರಾಮ, ಹಳಿಯಾಳ ತಾಲ್ಲೂಕು
2. ಶ್ರೀ ಮಂಜುನಾಥ ಸಿದ್ರಾಮಪ್ಪ ದಾನಪ್ಪನವರ್, ಖಮಡೊಳ್ಳಿ, ಹಳಿಯಾಳ ತಾಲ್ಲೂಕು
3. ಶ್ರೀಮತಿ ಜನಾಬಾಯಿ ವಿಶ್ವನಾಥ್ ಪಾಟೀಲ, ನಾಗಶೆಟ್ಟಿಕೊಪ್ಪ, ಹಳಿಯಾಳ ತಾಲ್ಲೂಕು

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಎಸ್. ಹುಚ್ಚಾಚಾರಿ**

ಪಿಆರ್. 123 ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

## ಒಳಾಡಳಿತ ಮತ್ತು ಸಾರಿಗೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಒಸಾಇ 344 ಪಿಎಂಎಸ್ 2003 ಬೆಂಗಳೂರು, ದಿನಾಂಕ: 11ನೇ ಫೆಬ್ರವರಿ 2004**

1872ರ ಇಂಡಿಯನ್ ಕ್ರಿಶ್ಚಿಯನ್ ಮ್ಯಾರೇಜ್ ಕಾಯಿದೆಯ 6 ಮತ್ತು 9ನೇ ಕಲಂನಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಇಂಡಿಯನ್ ಕ್ರಿಶ್ಚಿಯನ್ ಮ್ಯಾರೇಜ್ (ಕರ್ನಾಟಕ) ನಿಯಮಗಳು 1961 ರಂತೆ ಕಾರ್ಯನಿರ್ವಹಿಸಲು ಶ್ರೀ ಸಿ. ಚಿನ್ನಯ್ಯ, ಸಭಾಪಾಲಕರು, ರಾಜಾಜಿನಗರ ಕನ್ನಡ ಬ್ರದರನ್ ಅಸೆಂಬ್ಲಿ (ಚರ್ಚ್), ನಂ. 3057, 6ನೇ "ಎ" ಮೈನ್ ರೋಡ್, "ಸಿ" ಬ್ಲಾಕ್, ಗಾಯಿತ್ರಿನಗರ, ಬೆಂಗಳೂರು-560 021 ಇವರಿಗೆ ಮೇಲಿನ ಕಾಯಿದೆಯಡಿಯಲ್ಲಿ ಕರ್ನಾಟಕದಲ್ಲಿ ವಿವಾಹ ವಿಧಿಯನ್ನು ನೆರವೇರಿಸಲು ಪರವಾನಿಗೆಯನ್ನು ಈ ಮೂಲಕ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ. ಎಸ್. ಕಾಂತರಾಜು**

ಪಿಆರ್. 124 ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಮತ್ತು ಸಾರಿಗೆ ಇಲಾಖೆ, (ರಹದಾರಿ ಮತ್ತು ವಿದೇಶಿಯರು).

## ಕಂದಾಯ ಸಚಿವಾಲಯ

## ಅಧಿಸೂಚನೆ

### ಸಂಖ್ಯೆ: ಕಂಇ 15 ಮುನೋಮು 2004 ಬೆಂಗಳೂರು, ದಿನಾಂಕ: 13ನೇ ಫೆಬ್ರವರಿ 2004

ನೋಂದಣಿ ಮತ್ತು ಮುದ್ರಾಂಕ ಕಾಯ್ದೆ 1957ರ (1957ರ ಕರ್ನಾಟಕ ಕಾಯ್ದೆ-34) ಕಲಂ 9 (1)ಬಿ ರೊಂದಿಗೆ, ಕರ್ನಾಟಕ ಮುದ್ರಾಂಕ ನಿಯಮಗಳು 1958 ನಿಯಮ 11-ಎ(3) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ವೇಮಗಿರಿ ಪವರ್ ಜನರೇಶನ್ ಲಿಮಿಟೆಡ್, ಬೆಂಗಳೂರು ಇವರು ಒಟ್ಟು 140.015 ಕೋಟಿ ರೂಪಾಯಿಗಳ ಮೌಲ್ಯದ ಷೇರುಗಳನ್ನು ವಿತರಿಸಲು ತಗಲುವ ಸಂಚಿತ ಮುದ್ರಾಂಕ ಶುಲ್ಕವನ್ನು ದಿನಾಂಕ: 29.1.2004 ರಂದು ಒಟ್ಟು ರೂ. 14,00,150-00 (ಹದಿನಾಲ್ಕು ಲಕ್ಷದ ಒಂದು ನೂರ ಐವತ್ತು ರೂಪಾಯಿಗಳು ಮಾತ್ರ) ರೂಪಾಯಿಗಳನ್ನು ಸಂದಾಯಿಸಿರುತ್ತಾರೆಂದು ಕರ್ನಾಟಕ ಸರ್ಕಾರವು ಪ್ರಕಟಿಸುತ್ತದೆ.

ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ 15 ಮುನೋಮು 04, ದಿನಾಂಕ: 13.02.2004ರ ಪ್ರಕಾರ ಸಂಚಿತ ಮುದ್ರಾಂಕ ಶುಲ್ಕವನ್ನು ಮೊದಲ ಬಾರಿಗೆ ಸಂದಾಯಿಸಲಾಗಿದೆ ಎಂಬ ಪದಗಳನ್ನು ಷೇರು ಪತ್ರಗಳ ಮೇಲೆ ಮುದ್ರಿಸಿ ಬಿಡುಗಡೆ ಮಾಡಲು ಸರ್ಕಾರವು ಅನುಮತಿ ನೀಡಿದೆ.

ಕರ್ನಾಟಕ ಮುದ್ರಾಂಕ ನಿಯಮಾವಳಿಗಳ ನಿಯಮ 11-ಎ (3)ರ ಪ್ರಕಾರ ಸದರಿ ಸಂಸ್ಥೆಯು ವರ್ಗಾಯಿಸಿದ ನಿರ್ದಿಷ್ಟ ಷೇರುಗಳ ವರದಿಯನ್ನು ಸರ್ಕಾರಕ್ಕೆ ತಪ್ಪದೇ ಕಳುಹಿಸತಕ್ಕದ್ದು, ಹಾಗೂ ಕರ್ನಾಟಕ ಮುದ್ರಾಂಕ ನಿಯಮಾವಳಿಯಲ್ಲಿನ ನಿಯಮ 11-ಎ(4)ರ ಪ್ರಕಾರ ಸರ್ಕಾರದ ಸಂಬಂಧಪಟ್ಟ ಅಧಿಕಾರಿಗಳು ಷೇರುಗಳ ವಿತರಣೆಗೆ ಸಂಬಂಧಿಸಿದಂತೆ ನಿರ್ವಹಿಸಲಾದ ರಿಜಿಸ್ಟರ್ ಪುಸ್ತಕ ದಾಖಲೆಗಳನ್ನು ಪರಿಶೀಲಿಸಲು ಮತ್ತು ತಪಾಸಣೆ ನಡೆಸಲು ಸದರಿ ಸಂಸ್ಥೆಯು ಅವಕಾಶ ನೀಡತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಿ. ಎನ್. ಶ್ರೀಮುಖಿ**

ಪಿಆರ್. 125

ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ).

## COMMERCE AND INDUSTRIES SECRETARIAT

## ADDENDUM

### No. CI.06: MMM 2004 Bangalore, dated: 11th February 2004

**Read:** Notification No. CI. 59: MMM 2003 dated: 24.09: 9-10-2003

In the 6th Line of Notification No. CI 59: MMM 2003 date: 24-09: 9.10.2003, after the words in bracket Twenty eight point seven hectares only, the words "covered under survey nos. 1 & 2 shall be and shall always be deemed to have been added."

By Order and in the Name of the Governor of Karnataka

**A. B. SIDDHANTI**

PR-126

Under Secretary to Government (Mines),

Commerce & Industries Department.

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

### ಅಧಿಸೂಚನೆ ಸಂಖ್ಯೆ: ಮಮಇ 94 ಮಭಾಬ 2003(2) ಬೆಂಗಳೂರು, ದಿನಾಂಕ: 27ನೇ ಜನವರಿ 2004

ಸರ್ಕಾರದ ಅಧಿಸೂಚನೆ ಸಂಖ್ಯೆ ಮಮಇ 94 ಮಭಾಬ 2003, ದಿನಾಂಕ: 29.7.2003ರಲ್ಲಿ 20 ಜಿಲ್ಲೆಗಳಲ್ಲಿನ ಮಕ್ಕಳ ಕಲ್ಯಾಣ ಸಮಿತಿಗೆ ಅಧ್ಯಕ್ಷರನ್ನು ನಾಮನಿರ್ದೇಶನ ಮಾಡಿದ್ದು ಉಳಿದ ಏಳು ಜಿಲ್ಲೆಗಳಿಗೆ ಈ ಕೆಳಕಂಡ ಅಧ್ಯಕ್ಷರು ಮತ್ತು ಸದಸ್ಯರನ್ನು ಬಾಲ ನ್ಯಾಯ (ಮಕ್ಕಳ ರಕ್ಷಣೆ/ಪೋಷಣೆ) ಕಾಯ್ದೆ 2000 ಪ್ರಕರಣ 29(1) ಮತ್ತು (2)ರಡಿ ಹಾಗೂ ಕರ್ನಾಟಕ ರಾಜ್ಯ ಬಾಲನ್ಯಾಯ (ಮಕ್ಕಳ ರಕ್ಷಣೆ/ಪೋಷಣೆ) ನಿಯಮ 2002ರ ನಿಯಮ 7(2)ರ ಮೇರೆಗೆ ಸರ್ಕಾರಕ್ಕೆ ಪ್ರದತ್ತವಾಗಿರುವ ಅಧಿಕಾರದಡಿಯಲ್ಲಿ ಸರ್ಕಾರ ನೇಮಕ ಮಾಡಿದೆ.

| ಕ್ರಮ ಸಂಖ್ಯೆ | ಮಕ್ಕಳ ಕಲ್ಯಾಣ ಸಮಿತಿ ಕಾರ್ಯನಿರ್ವಹಿಸಬೇಕಾದ ಜಿಲ್ಲೆಗಳು | ನಾಮನಿರ್ದೇಶನ ಮಾಡಿದ ಮಕ್ಕಳ ಕಲ್ಯಾಣ ಸಮಿತಿಯ ಅಧ್ಯಕ್ಷರು/ ಸದಸ್ಯರುಗಳ ವಿವರಗಳು | |
|---|---|---|---|
| 1. | ಮಂಡ್ಯ | 1. ಶ್ರೀ ಎಚ್. ಎನ್. ಶಿವಣ್ಣಗೌಡ | ಅಧ್ಯಕ್ಷರು |
| | | 2. ಶ್ರೀಮತಿ ಕೆ. ಸಿ. ಜಯಶೀಲ | ಸದಸ್ಯರು |
| | | 3. ಶ್ರೀ ಬಿ. ಕೆ. ರಾಮಯ್ಯ | ಸದಸ್ಯರು |
| | | 4. ಡಾ: ಜಗದೀಶ್ ಕುಮಾರ್ | ಸದಸ್ಯರು |
| | | 5. ಶ್ರೀ ವಿ. ಕೃಷ್ಣಪ್ಪ | ಸದಸ್ಯರು |
| 2. | ಚಿಕ್ಕಮಗಳೂರು | 1. ಶ್ರೀಮತಿ ಜಿ. ಎಲ್. ಯಶೋಧ ಲಕ್ಷ್ಮಣಗೌಡ | ಅಧ್ಯಕ್ಷರು |
| | | 2. ಶ್ರೀ ಡಿ. ಕೆ. ಚಂದ್ರಶೇಖರ್ ಭಟ್ | ಸದಸ್ಯರು |
| | | 3. ಶ್ರೀ ಬಿ. ಆರ್. ಜಗದೀಶ್ | ಸದಸ್ಯರು |
| | | 4. ಶ್ರೀಮತಿ ಡಿ. ಎಸ್. ಪೂರ್ಣೇಶ್ವರಿ | ಸದಸ್ಯರು |
| | | 5. ಶ್ರೀಮತಿ ವಸಂತಮಾಲಾ ದತ್ತಾತ್ರಿ | ಸದಸ್ಯರು |

| ಕ್ರಮ ಸಂಖ್ಯೆ | ಮಕ್ಕಳ ಕಲ್ಯಾಣ ಸಮಿತಿ ಕಾರ್ಯನಿರ್ವಹಿಸಬೇಕಾದ ಜಿಲ್ಲೆಗಳು | ನಾಮನಿರ್ದೇಶನ ಮಾಡಿದ ಮಕ್ಕಳ ಕಲ್ಯಾಣ ಸಮಿತಿಯ ಅಧ್ಯಕ್ಷರು/ ಸದಸ್ಯರುಗಳ ವಿವರಗಳು | |
|---|---|---|---|
| 3. | ಮೈಸೂರು | 1. ಡಾ. ಆರ್. ನಾಗರಾಜು | ಅಧ್ಯಕ್ಷರು |
| | | 2. ಶ್ರೀಮತಿ ಎಂ. ವಿಜಯಲಕ್ಷ್ಮಿ ಅರಸ್ | ಸದಸ್ಯರು |
| | | 3. ಶ್ರೀ ಕೆ. ಗುರುರಾಜಾರಾವ್ | ಸದಸ್ಯರು |
| | | 4. ಶ್ರೀ ಎಚ್. ರಾಜು | ಸದಸ್ಯರು |
| | | 5. ಶ್ರೀಮತಿ ಬಿ. ಬೋರಮ್ಮ | ಸದಸ್ಯರು |
| 4. | ಚಿತ್ರದುರ್ಗ | 1. ಡಾ. ಜಿ. ಸರ್ವಮಂಗಳ | ಅಧ್ಯಕ್ಷರು |
| | | 2. ಶ್ರೀ ಡಿ. ಕುಬೇಂದ್ರನಾಯಕ್ | ಸದಸ್ಯರು |
| | | 3. ಶ್ರೀ ಎಸ್. ಎಂ. ಗುರುಮೂರ್ತಿ | ಸದಸ್ಯರು |
| | | 4. ಶ್ರೀಮತಿ ಎನ್. ನಾಗರತ್ನ | ಸದಸ್ಯರು |
| | | 5. ಶ್ರೀ ಎಂ. ಕರಿಯಪ್ಪ | ಸದಸ್ಯರು |
| 5. | ಬೆಳಗಾಂ | 1. ಶ್ರೀಮತಿ ವೈಜಯಂತಿ ಎಂ. ಚೌಗಲ | ಅಧ್ಯಕ್ಷರು |
| | | 2. ಶ್ರೀಮತಿ ಸುನಂದ (ಲೀಲಾವತಿ) ನಾಎಮ್ಮಿ | ಸದಸ್ಯರು |
| | | 3. ಶ್ರೀಮತಿ ಪೂರ್ಣಿಮಾ ಪಟ್ಟಣ ಶೆಟ್ಟಿ | ಸದಸ್ಯರು |
| | | 4. ಡಾ: ಸುತೇಶ ಜಿ. ಕುಲಕರ್ಣಿ | ಸದಸ್ಯರು |
| | | 5. ಶ್ರೀಮತಿ ಶಿಲಾನಂದ ಲೋಬೋ | ಸದಸ್ಯರು |
| 6. | ಕೋಲಾರ | 1. ಶ್ರೀಮತಿ ಪಿ. ಕಮಲಂ | ಅಧ್ಯಕ್ಷರು |
| | | 2. ಶ್ರೀಮತಿ ಎಚ್. ವಿ. ಸುಗುಣಮ್ಮ | ಸದಸ್ಯರು |
| | | 3. ಶ್ರೀ ಎಸ್. ಎನ್. ನಂಜುಂಡಪ್ಪ | ಸದಸ್ಯರು |
| | | 4. ಶ್ರೀ ಎಂ. ಎಂ. ನಾರಾಯಣಸ್ವಾಮಿ | ಸದಸ್ಯರು |
| | | 5. ಶ್ರೀಮತಿ ಆಶಾ. ಎಂ. ಪಿ. | ಸದಸ್ಯರು |
| 7. | ಧಾರವಾಡ | 1. ಡಾ. ಡಿ. ವಿ. ಕರ್ಪೂರಮಠ | ಅಧ್ಯಕ್ಷರು |
| | | 2. ಶ್ರೀಮತಿ ಗೀತಾ ಆರ್. ನಾಯಕ್ | ಸದಸ್ಯರು |
| | | 3. ಶ್ರೀ ದುರಗಪ್ಪಾಡಿ ಮೇಚಣ್ಣನವರ್ | ಸದಸ್ಯರು |
| | | 4. ಶ್ರೀಮತಿ ನಂದಿನಿ ಆರ್. ಅಲಮೇಲಕರ್ | ಸದಸ್ಯರು |
| | | 5. ಶ್ರೀ ಎಸ್. ಹೆಚ್. ಹೆಳವರ | ಸದಸ್ಯರು |

ಈ ಮಕ್ಕಳ ಕಲ್ಯಾಣ ಸಮಿತಿಯು ಬಾಲನ್ಯಾಯ ಕಾಯ್ದೆ 2000 ಮತ್ತು ಕರ್ನಾಟಕ ಬಾಲನ್ಯಾಯ ನಿಯಮ (ಮಕ್ಕಳ ರಕ್ಷಣ ಮತ್ತು ಪೋಷಣೆ) 2002ರಲ್ಲಿ ಪ್ರದತ್ತವಾದ ಕರ್ತವ್ಯಗಳನ್ನು ನಿರ್ವಹಿಸಲು ಅಧಿಕಾರವನ್ನು ಹೊಂದಿರುತ್ತದೆ.

ಮೇಲೆ ನೇಮಿಸಿರುವ ಅಧ್ಯಕ್ಷರುಗಳು ಹಾಗೂ ಸದಸ್ಯರುಗಳು ಅಧಿಸೂಚನೆ ಸಂಖ್ಯೆ ಮಮಇ 94 ಮಬಬ 2003, ದಿನಾಂಕ 21.7.2003ರ ಅನುಬಂಧದಲ್ಲಿ ತಿಳಿಸಿರುವ ಷರತ್ತುಗೊಳಪಟ್ಟಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಎಂ. ಚಂದ್ರಮ್ಮ**

ಪಿ.ಆರ್. 128 ಸರ್ಕಾರದ ಅಧೀನ ಕಾರ್ಯದರ್ಶಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

**ಅಧಿಸೂಚನೆ ಸಂಖ್ಯೆ: ಮಮಇ 150 ಮಭಾಬ 2003 ಬೆಂಗಳೂರು, ದಿನಾಂಕ: 20ನೇ ಜನವರಿ 2004**

ಹೊಸ ಬಾಲನ್ಯಾಯ (ಮಕ್ಕಳ ರಕ್ಷಣೆ ಹಾಗೂ ಪೋಷಣೆ) ಕಾಯ್ದೆ 2000ರ ಪರಿಚ್ಛೇದ (62) ಮತ್ತು ಕರ್ನಾಟಕ ಬಾಲನ್ಯಾಯ (ಮಕ್ಕಳ ರಕ್ಷಣೆ ಮತ್ತು ಪೋಷಣೆ) ನಿಯಮಾವಳಿ 2002ರ ನಿಯಮ 43ರ ಮೇರೆಗೆ ಸರ್ಕಾರಕ್ಕೆ ಪ್ರದತ್ತವಾಗಿರುವ ಅಧಿಕಾರದಡಿಯಲ್ಲಿ ಈ ಕೆಳಕಂಡ ಅಧಿಕಾರಿ ಮತ್ತು ಅಧಿಕಾರೇತರ ಸದಸ್ಯರನ್ನೊಳಗೊಂಡ ರಾಜ್ಯ ಮಟ್ಟದ ಸಲಹಾ ಸಮಿತಿಯನ್ನು ಸರ್ಕಾರ ನೇಮಕ ಮಾಡಿದೆ

**ಅಧಿಕಾರಿ ಸದಸ್ಯರು**

| | | |
|---|---|---|
| 1. | ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆಯ ಸಚಿವರು | ಅಧ್ಯಕ್ಷರು |
| 2. | ಕಾರ್ಯದರ್ಶಿಗಳು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ | ಸದಸ್ಯರು |
| 3. | ಕಾರ್ಯದರ್ಶಿಗಳು, ಶಿಕ್ಷಣ ಇಲಾಖೆ | ಸದಸ್ಯರು |
| 4. | ಕಾರ್ಯದರ್ಶಿಗಳು, ಗೃಹ ಇಲಾಖೆ | ಸದಸ್ಯರು |
| 5. | ಕಾರ್ಯದರ್ಶಿಗಳು, ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ | ಸದಸ್ಯರು |
| 6. | ಕಾರ್ಯದರ್ಶಿಗಳು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ | ಸದಸ್ಯರು |
| 7. | ಕಾರ್ಯದರ್ಶಿಗಳು, ಕಾರ್ಮಿಕ ಇಲಾಖೆ | ಸದಸ್ಯರು |
| 8. | ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ | ಸದಸ್ಯರು |
| 9. | ನಿರ್ದೇಶಕರು, ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆ | ಸದಸ್ಯರು |

**ಅಧಿಕಾರೇತರ ಸದಸ್ಯರು:**

1. ಶ್ರೀಮತಿ ಸುಮಾ ವಸಂತ, ಎಂ. ಎಲ್. ಎ., ಬೆಂಗಳೂರು.
2. ಶ್ರೀಮತಿ ನೀನಾ ನಾಯಕ್, ಕರ್ನಾಟಕ ರಾಜ್ಯ ಮಕ್ಕಳ ಕಲ್ಯಾಣ ಸಲಹೆ
3. ಶ್ರೀಮತಿ ಸುಶೀಲಮ್ಮ, ಅಧ್ಯಕ್ಷರು, ಸುಮಂಗಲಿ ಸೇವಾಶ್ರಮ
4. ಡಾ: ಸತೀಶ ಗಿರಿಮಜಿ, ಮಕ್ಕಳ ತಜ್ಞರು, ನಿಮ್ಹಾನ್ಸ್, ಬೆಂಗಳೂರು
5. ಡಾ: ಶ್ರೀಮತಿ ವಾಸಂತಿ ವಿಜಯ, ಪ್ರೊಫೆಸರ್, ಬೆಂಗಳೂರು ವಿಶ್ವ ವಿದ್ಯಾಲಯದ ಸಮಾಜ ಅಧ್ಯಯನ ವಿಭಾಗ.
6. ಡಾ: ತಾಜ್ ಶೌಕತ್, ಸಮಾಜ ಕಾರ್ಯಕರ್ತರು, ಬೆಂಗಳೂರು
7. ಶ್ರೀಮತಿ ಸರೋಜಿನಿ ಮಹಿಷಿ, ವಕೀಲರು, ಬೆಂಗಳೂರು.

ಮೇಲಿನ ಸಮಿತಿಗೆ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ರವರನ್ನು ಸದಸ್ಯ ಕಾರ್ಯದರ್ಶಿಗಳನ್ನಾಗಿ ನೇಮಕ ಮಾಡಿದೆ.

ರಾಜ್ಯ ಮಟ್ಟದ ಸಲಹಾ ಸಮಿತಿಯ ಅವಧಿ ಈ ಅಧಿಸೂಚನೆ ಪ್ರಕಟಗೊಂಡ ದಿನಾಂಕದಿಂದ ಮೂರು ವರ್ಷಗಳವರೆಗೆ ಅಥವಾ ಮುಂದಿನ ಆದೇಶದವರೆಗೆ ಜಾರಿಯಲ್ಲಿರುತ್ತದೆ. ಸಲಹಾ ಮಂಡಳಿಯ ಕಾರ್ಯಕ್ರಮಗಳ ವಿವರಗಳನ್ನು ಅನುಬಂಧದಲ್ಲಿ ಲಗತ್ತಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಎಂ. ಚಂದ್ರಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

**ಸರ್ಕಾರಿ ಆದೇಶ ಸಂಖ್ಯೆ: ಮಮಇ 150 ಮಭಾಬ 2003ರ ದಿನಾಂಕ: 31ನೇ ಜನವರಿ 2004ರ**

**ಅನುಬಂಧ**

**ಸಲಹಾ ಮಂಡಳಿಯ ಕಾರ್ಯಕ್ರಮಗಳ ವಿವರಗಳು:**

1. ಬಾಲಾಪರಾಧಿಗಳ: ಬಾಲಾಪರಾಧಿ ಗೃಹಗಳಲ್ಲಿನ ಮಕ್ಕಳ ರಕ್ಷಣೆ, ಪೋಷಣೆ ಹಾಗೂ ಕಲ್ಯಾಣ ಮತ್ತು ಪುನರ್ವಸತಿಗೆ ಸಂಬಂಧಪಟ್ಟ ವಿಷಯಗಳ ಸಮಗ್ರ ತನಿಖೆ, ಸೌಕರ್ಯಗಳ ಪರಿಶೀಲನೆ ಹಾಗೂ ನ್ಯೂನತೆಗಳನ್ನು ಸರಿಪಡಿಸುವ ಬಗ್ಗೆ ಪರಿಶೀಲನೆ ಮಾರ್ಗದರ್ಶನ.
2. ಮಕ್ಕಳ ಅಭಿವೃದ್ಧಿಗೆ ಸಂಬಂಧಪಟ್ಟ ವಿಷಯಗಳ ಪರಿಶೀಲನೆ.
3. ಬಾಲಪರಾಧಿಗಳ ಶಿಕ್ಷಣ: ತರಬೇತಿ: ಪುನರ್ವಸತಿಗೆ ಸಂಬಂಧಪಟ್ಟ ಕಾರ್ಯಕ್ರಮಗಳ ಪ್ರಗತಿಪರ ಅಭಿವೃದ್ಧಿಗೆ ಸಂಬಂಧಪಟ್ಟಂತೆ ವಿಧಿ ವಿಧಾನಗಳ ಬಗ್ಗೆ ಸಲಹೆ: ಮಾರ್ಗದರ್ಶನ ನೀಡುವುದು.
4. ಬಾಲಾಪರಾಧಿ ಗೃಹಗಳ ಸ್ಥಾಪನೆ ಮತ್ತು ನಿರ್ವಹಣೆಯ ವಿಷಯಕ್ಕೆ ಸಂಬಂಧಪಟ್ಟಂತೆ ಸರ್ಕಾರ: ಸರ್ಕಾರೇತರ ಸ್ವಯಂ ಸೇವಾ ಸಂಸ್ಥೆಗಳೊಂದಿಗೆ ನಿಕಟ ಸಂಪರ್ಕ: ಸಲಹೆ ಹಾಗೂ ಸಂಪನ್ಮೂಲಗಳ ಕ್ರೋಢೀಕರಿಸುವ ಬಗ್ಗೆ ಮಾಹಿತಿ ಮಾರ್ಗದರ್ಶನ ನೀಡುವುದು.
5. ಸಂಬಂಧಪಟ್ಟ ವ್ಯಾಪ್ತಿಯಲ್ಲಿ ಬರುವ ಸರ್ಕಾರ: ಸರ್ಕಾರೇತರ ಸ್ವಯಂ ಸೇವಾ ಸಂಸ್ಥೆಗಳು ಸಲ್ಲಿಸುತ್ತಿರುವ ಸೇವೆಗಳ ಸಮಗ್ರ ತನಿಖೆ ಹಾಗೂ ಇನ್ನೂ ಹೆಚ್ಚಿನ ಅಭಿವೃದ್ಧಿಗಾಗಿ ಸಲಹೆ: ಸೂಚನೆಗಳನ್ನು ನೀಡುವುದು.
6. ಸಲಹಾ ಮಂಡಳಿಯ ಸರ್ಕಾರೇತರ ಸದಸ್ಯರುಗಳನ್ನು ರಾಜ್ಯ ಸರ್ಕಾರವು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ನಿರ್ದೇಶಕರ ಶಿಫಾರಸ್ಸಿನ ಮೇರೆಗೆ ನೇಮಕ ಮಾಡುವುದು ಹಾಗೂ ನೇಮಕಗೊಂಡ ಸದಸ್ಯರುಗಳ ಮೂರು ವರ್ಷಗಳ ಅವಧಿಯವರೆಗೆ ಸದಸ್ಯತ್ವವನ್ನು ಹೊಂದಿರುತ್ತಾರೆ. ಹಾಗೂ ಪುನರ್ ನೇಮಕಾತಿ ಹೊಂದಲು ಸಹ ಅರ್ಹತೆ ಹೊಂದಿರುತ್ತಾರೆ.
7. ರಾಜ್ಯ ಸರ್ಕಾರವು ನೇಮಕಗೊಂಡ ಸರ್ಕಾರೇತರ ಸದಸ್ಯರ ಸದಸ್ಯತ್ವವನ್ನು ನಿಗದಿತ ಅವಧಿಯು ಪೂರ್ಣಗೊಳ್ಳುವ ಮೊದಲೇ ಅವರ ಸದಸ್ಯತ್ವವನ್ನು ಕಾರಣ ನೀಡದೇ ರದ್ದುಗೊಳಿಸುವ ಅಧಿಕಾರವನ್ನು ಹೊಂದಿರುತ್ತದೆ.
8. ಸಲಹಾ ಮಂಡಳಿಯಲ್ಲಿ ನಾಮನಿರ್ದೇಶನಗೊಂಡ ಸದಸ್ಯರ ಹುದ್ದೆ ತೆರವಾದಲ್ಲಿ ಈ ಹುದ್ದೆಗೆ ಇತರೆ ಬದಲಿ ಸರ್ಕಾರೇತರ ಸದಸ್ಯರನ್ನು ನೇಮಕಾತಿ ಮಾಡಬಹುದಾಗಿದ್ದು, ಅವರು ಸದಸ್ಯತ್ವವನ್ನು ನಾಮನಿರ್ದೇಶನಗೊಂಡ ಮುಂದುವರಿಕೆಯ ಅರ್ಹರಿರುತ್ತಾರೆ.
9. ರಾಜ್ಯ ಮಟ್ಟದ ಸಲಹಾ ಸಮಿತಿಯು ಪ್ರತಿ ಆರು ತಿಂಗಳಿಗೊಮ್ಮೆ ಸಭೆಯನ್ನು ಸೇರತಕ್ಕದ್ದು, ಅಗತ್ಯವಿದ್ದಲ್ಲಿ ಅವಶ್ಯಕತೆಗೆ ಅನುಗುಣವಾಗಿ ಅಧ್ಯಕ್ಷರ ಪೂರ್ವಾನುಮತಿಯ ಮೇರೆಗೆ ಅಥವಾ ಒಟ್ಟು ಸದಸ್ಯರಲ್ಲಿ 1/3 ಭಾಗದ ಸದಸ್ಯರುಗಳ ಸಹಮತದೊಂದಿಗೆ ಸಭೆಯನ್ನು ಕರೆಯಬಹುದಾಗಿದೆ.
10. ಪ್ರತಿಯೊಂದು ಸಭೆಯನ್ನು ಸಲಹಾ ಸಮಿತಿಯ ಅಧ್ಯಕ್ಷರ ಉಪಸ್ಥಿತಿಯಲ್ಲಿ ನಡೆಸತಕ್ಕದ್ದು. ಅಧ್ಯಕ್ಷರ ಅನುಪಸ್ಥಿತಿಯಲ್ಲಿ, ಆಯ್ಕೆಯಾದ ಸದಸ್ಯರುಗಳಲ್ಲಿ ಒಬ್ಬರನ್ನು ಅಧ್ಯಕ್ಷರನ್ನಾಗಿ ಆರಿಸಿ ಸಭೆಯನ್ನು ನಡೆಸತಕ್ಕದ್ದು. ಕನಿಷ್ಠ ಸಹ ಸಭೆಯ ಸದಸ್ಯರುಗಳ ಸಂಖ್ಯೆ: 7ಕ್ಕಿಂತ ಕಡಿಮೆ ಇರಬಾರದು.
11. ಸಲಹಾ ಸಮಿತಿಯ ಸದಸ್ಯ ಕಾರ್ಯದರ್ಶಿಗಳು, ಸಲಹಾ ಸಮಿತಿಯ ಸಭೆ ನಡೆಯುವ ದಿನಾಂಕ, ಸ್ಥಳ ಸಮಯದ ಬಗ್ಗೆ ಹಾಗೂ ಸಭೆಯ ಕಾರ್ಯಸೂಚಿಯನ್ನು ಸಭೆ ನಡೆಸುವ ಏಳು ದಿನಗಳ ಮೊದಲೇ ಸಲಹಾ ಸಮಿತಿಯ ಎಲ್ಲಾ ಸದಸ್ಯರುಗಳಿಗೆ ಕಳುಹಿಸತಕ್ಕದ್ದು.
12. ಸದಸ್ಯ ಕಾರ್ಯದರ್ಶಿಗಳು, ಪ್ರತಿ ಸಭೆ ನಡೆದ ಕೂಡಲೇ ಸಭೆಯ ನಡವಳಿಕೆಯನ್ನು ಸಿದ್ಧಪಡಿಸಿ ಅಧ್ಯಕ್ಷರುಗಳ ಅನುಮೋದನೆ ಪಡೆದ ನಂತರ ಸಲಹಾ ಸಮಿತಿಯ ಎಲ್ಲಾ ಸದಸ್ಯರುಗಳಿಗೆ ಕಳುಹಿಸತಕ್ಕದ್ದು.

**ಆರ್. ಎಂ. ಚಂದ್ರಮ್ಮ**

ಪಿ.ಆರ್. 129 ಸರ್ಕಾರದ ಅಧೀನ ಕಾರ್ಯದರ್ಶಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

## ಕಂದಾಯ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಕಂಇ 294 ಎಲ್ಆರ್ಎ 2003 ಬೆಂಗಳೂರು, ದಿನಾಂಕ: 22ನೇ ಜನವರಿ 2004**

ಕರ್ನಾಟಕ ಭೂ ಸುಧಾರಣೆ ಕಾಯ್ದೆ, 1961ರ ಕಲಂ 48 (1) (3) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರದ ಅಧಿಸೂಚನೆ ಸಮಸಂಖ್ಯೆ ದಿನಾಂಕ: 1.1.2004 ರಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ, ಬೆಳ್ತಂಗಡಿ ತಾಲ್ಲೂಕು ಭೂನ್ಯಾಯ ಮಂಡಳಿಯ ಅಧ್ಯಕ್ಷರನ್ನಾಗಿ ಫಾರೆಸ್ಟ್ ಸೆಟ್ಲ್‌ಮೆಂಟ್ ಅಧಿಕಾರಿ, ಮಂಗಳೂರು ಅವರನ್ನು ನೇಮಕ ಮಾಡಿದ್ದನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಿ, ಅವರ ಬದಲಿಗೆ ಅಧ್ಯಕ್ಷರು, ಹೆಚ್ಚುವರಿ ಭೂನ್ಯಾಯ ಮಂಡಳಿ, ಬೆಳ್ತಂಗಡಿ, ದಕ್ಷಿಣ ಕನ್ನಡಜಿಲ್ಲೆ ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಅಧ್ಯಕ್ಷರನ್ನಾಗಿ ನೇಮಕ ಮಾಡಿ ಆದೇಶ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ಕೆ. ಮದೀಹಳ್ಳಿ**

ಸರ್ಕಾರದ ಉಪ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂ ಸುಧಾರಣೆ).

ಪಿಆರ್. 109

## ಸಹಕಾರ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಎಂಡಬ್ಲ್ಯೂ 14 ಸಿಎನ್ಎಸ್ 2004 ಬೆಂಗಳೂರು, ದಿನಾಂಕ: 5ನೇ ಫೆಬ್ರವರಿ 2004**

ಈ ಹಿಂದೆ ಸರ್ಕಾರದಿಂದ ಮಾಡಿರುವ ಎಲ್ಲಾ ನಾಮ ನಿರ್ದೇಶನಗಳನ್ನು ರದ್ದುಪಡಿಸಿ, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಕಲಂ 29ರ ಉಪ ಕಲಂ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಈ ಕೆಳಕಂಡ ವ್ಯಕ್ತಿಗಳನ್ನು ಬಾಗಲಕೋಟೆ ಜಿಲ್ಲೆ ಹುನಗುಂದ ತಾಲ್ಲೂಕಿನ ಮುರೋಳ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಬ್ಯಾಂಕ್ ನಿಯಮಿತ, ಮುರೋಳ ಇದರ ಆಡಳಿತ ಮಂಡಳಿಯ ಸದಸ್ಯರುಗಳನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡಿದೆ.

1. ಶ್ರೀ ಮಲ್ಲಪ್ಪ ಪರಪ್ಪ ಗಾಣಿಗೇರ, ಸಾ: ಮುರೋಳ, ತಾ: ಹುನಗುಂದ
2. ಶ್ರೀ ಸಂಗಪ್ಪ ಶಿವಬಸಪ್ಪ ಕೊಂಡೇಕಾರ, ಸಾ: ಮುರೋಳ, ತಾ: ಹುನಗುಂದ
3. ಶ್ರೀಮತಿ ಬಸಂತವ್ವ ವೀರಶ ಉಳ್ಳಳ್ಳಿ, ಸಾ: ಮುರೋಳ, ತಾ: ಹುನಗುಂದ

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಎಸ್. ಹುಚ್ಚಾಚಾರಿ**

ವಿಶೇಷ ಕರ್ತವ್ಯಾಧಿಕಾರಿ,

ಸಹಕಾರ ಇಲಾಖೆ.

ಪಿಆರ್. 111

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಮಮಇ 94 ಮಭಾಬ 2003(1) ಬೆಂಗಳೂರು, ದಿನಾಂಕ: 27ನೇ ಜನವರಿ 2004**

ಸರ್ಕಾರದ ಅಧಿಸೂಚನೆ ಸಂಖ್ಯೆ ಮಮಇ 94 ಮಭಾಬ 2003, ದಿನಾಂಕ: 21.7.2003ರಲ್ಲಿ ನಾಮ ನಿರ್ದೇಶನ ಮಾಡಿರುವ 20 ಜಿಲ್ಲೆಗಳಲ್ಲಿನ ಮಕ್ಕಳ ಕಲ್ಯಾಣ ಸಮಿತಿಯ ಸದಸ್ಯರಲ್ಲಿ 5 ಜನ ಸದಸ್ಯರಿಗಿಂತ ಕಡಿಮೆ ಸದಸ್ಯರನ್ನು ಹೊಂದಿರುವ ಜಿಲ್ಲೆಗಳಿಗೆ ಹೆಚ್ಚುವರಿಯಾಗಿ ಈ ಕೆಳಕಂಡ ಸದಸ್ಯರನ್ನು ಬಾಲನ್ಯಾಯ (ಮಕ್ಕಳ ರಕ್ಷಣೆ ಮತ್ತು ಪೋಷಣೆ) ಕಾಯ್ದೆ 2000 ಪ್ರಕರಣ 29(1) ಮತ್ತು (2) ರಡಿ ಹಾಗೂ ಕರ್ನಾಟಕ ರಾಜ್ಯ ಬಾಲನ್ಯಾಯ (ಮಕ್ಕಳ ರಕ್ಷಣೆ ಮತ್ತು ಪೋಷಣೆ) ನಿಯಮಾವಳಿ 2002ರ ನಿಯಮ 7(2)ರ ಮೇರೆಗೆ ಸರ್ಕಾರಕ್ಕೆ ಪ್ರದತ್ತವಾಗಿರುವ ಅಧಿಕಾರದಡಿಯಲ್ಲಿ ನಾಮನಿರ್ದೇಶನ ಮಾಡಿದೆ.

| ಕ್ರಮ ಸಂಖ್ಯೆ | ಮಕ್ಕಳ ಕಲ್ಯಾಣ ಸಮಿತಿ ಕಾರ್ಯ ನಿರ್ವಹಿಸಬೇಕಾದ ಜಿಲ್ಲೆಗಳು | ನಾಮ ನಿರ್ದೇಶನ ಮಾಡಿದ ಮಕ್ಕಳ ಕಲ್ಯಾಣ ಸಮಿತಿಯ ಸದಸ್ಯರ ವಿವರಗಳು |
|---|---|---|
| 1. | ಗದಗ | 1. ಶ್ರೀ ಶಂಕರ್ ಸಿಂಗ್ ಎಸ್. ರಜಪೂತ<br>2. ಶ್ರೀಮತಿ ಎಂ. ಎಸ್ತಾರ್ ರಜೀನ |
| 2. | ರಾಯಚೂರು | 1. ಶ್ರೀ ಬಸಪ್ಪ ಶಾಲಿ<br>2. ಶ್ರೀಮತಿ ಮೀರಬಾಯಿ |
| 3. | ಗುಲ್ಬರ್ಗಾ | 1. ಶ್ರೀ ಕೆ. ಎಂ. ಕಾಬಾ<br>2. ಶ್ರೀಮತಿ ಅಪರ್ಣ ಕೊಲ್ಲಾ |
| 4. | ಉಡುಪಿ | 1. ಶ್ರೀಮತಿ ಸುವರ್ಣಲತಾ<br>2. ಶ್ರೀಮತಿ ಭಾರತಿ ಪ್ರಭು |

| | | |
|---|---|---|
| 5. | ಬಿಜಾಪುರ | 1. ಶ್ರೀ ಸಂಗಯ್ಯ ಬಸಯ್ಯ ಮಠಪತಿ<br>2. ಶ್ರೀಮತಿ ವಸುಂದರಾ ಎಂ. ಐನಾಪುರ |
| 6. | ಹಾಸನ | 1. ಡಾ. ಎಚ್. ಕೆ. ಪಾಲಾಕ್ಷ<br>2. ಶ್ರೀ ಎಸ್. ರಾಜಾರಾಂ |
| 7. | ಶಿವಮೊಗ್ಗ | 1. ಶ್ರೀ ಸೈಯದ್ ಅಹಮದ್ ಭಾಷಾ<br>2. ಶ್ರೀ ಎಚ್. ಸತೀಶ್ ಚಂದ್ರ<br>3. ಶ್ರೀಮತಿ ಎಂ. ಡಿ. ಭೋಜಮ್ಮ |
| 8. | ಬಾಗಲಕೋಟೆ | 1. ಶ್ರೀ ಎಸ್. ಬಿ. ಜೋಳದ<br>2. ಶ್ರೀ ಶರಣಪ್ಪ ನರಸಪ್ಪ ಜುಟ್ವಲ್ |
| 9. | ದಾವಣಗೆರೆ | 1. ಶ್ರೀಮತಿ ಆರ್. ಜಯಂತಿಶ್ರೀ<br>2. ಡಾ. ಆರ್. ಜಿ. ಗೀತಾಲಕ್ಷ್ಮಿ |
| 10. | ಬೀದರ್ | 1. ಶ್ರೀಮತಿ ಯಶೋದಮ್ಮ ಸಿದ್ಧಬಟ್ಟೆ<br>2. ಮೆ. ಲೀಲಾವತಿ ಈಶ್ವರಪ್ಪ ಚಾಕೋತೆ |
| 11. | ಕೊಡಗು | 1. ಶ್ರೀ ಟಿ. ಸಿ. ತಮ್ಮಯ್ಯ<br>2. ಶ್ರೀ ವಾಸುದೇವ ಎಚ್. ಎಸ್.<br>3. ಶ್ರೀಮತಿ ಹರಿಣಾಕ್ಷಿ ಪಿ. ಎಲ್. |
| 12. | ಕೊಪ್ಪಳ | 1. ಶ್ರೀಮತಿ ಶಿವಲೀಲಾ ವನ್ನೂರ<br>2. ಶ್ರೀ ರಮೇಶ್ ಗೌಳಿ |
| 13. | ಮಂಗಳೂರು | 1. ಶ್ರೀ ಅಶ್ವಿಲ್ ಕೆ. ಸಾಲಿನ್<br>2. ಶ್ರೀಮತಿ ಕೆ. ಎ. ರೋಹಿಣಿ |
| 14. | ಹಾವೇರಿ | 1. ಶ್ರೀ ಗಂಗಾಧರ ಮಲ್ಲಿಕಾರ್ಜುನಪ್ಪನಂದಿ<br>2. ಶ್ರೀ ಮಹಮದ್ ಹನೀಫ್ |
| 15. | ಬೆಂಗಳೂರು ನಗರ | 1. ಡಾ: ಭಾರತಿ ಎಂ. |

ಈ ಮಕ್ಕಳ ಕಲ್ಯಾಣ ಸಮಿತಿಯು ಬಾಲನ್ಯಾಯ ಕಾಯ್ದೆ 2000 ಮತ್ತು ಕರ್ನಾಟಕ ಬಾಲನ್ಯಾಯ ನಿಯಮ (ಮಕ್ಕಳ ರಕ್ಷಣೆ ಮತ್ತು ಪೋಷಣೆ) 2002ರಲ್ಲಿ ಪ್ರದತ್ತವಾದ ಕರ್ತವ್ಯಗಳನ್ನು ನಿರ್ವಹಿಸಲು ಅಧಿಕಾರವನ್ನು ಹೊಂದಿರುತ್ತದೆ.

ಮೇಲೆ ನೇಮಿಸಿರುವ ಸದಸ್ಯರುಗಳು ಅಧಿಸೂಚನೆ ಸಂಖ್ಯೆ ಮಮಇ 94 ಮಬಬ 2003, ದಿನಾಂಕ: 21.7.2003ರ ಅನುಬಂಧದಲ್ಲಿ ತಿಳಿಸಿರುವ ಷರತ್ತುಗೊಳಪಟ್ಟಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಎಂ. ಚಂದ್ರಮ್ಮ**

ಪಿ.ಆರ್. 127 ಸರ್ಕಾರದ ಅಧೀನ ಕಾರ್ಯದರ್ಶಿ,

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

**ಸಹಕಾರ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಿಎಂಡಬ್ಲ್ಯೂ 12 ಸಿಎನ್‌ಎಸ್ 2004 ಬೆಂಗಳೂರು, ದಿನಾಂಕ: 16ನೇ ಫೆಬ್ರವರಿ 2004**

ಈ ಹಿಂದೆ ಸರ್ಕಾರದಿಂದ ಮಾಡಿರುವ ಎಲ್ಲಾ ನಾಮನಿರ್ದೇಶನಗಳನ್ನು ರದ್ದುಪಡಿಸಿ, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಕಲಂ 29ರ ಉಪ ಕಲಂ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಈ ಕೆಳಕಂಡ ವ್ಯಕ್ತಿಗಳನ್ನು, ಕೊಡಗು ಜಿಲ್ಲೆ ಸೋಮವಾರಪೇಟೆ ತಾಲ್ಲೂಕಿನ ಅಭ್ಯತ್‌ಮಂಗಲ ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ., ನೆಲ್ಯಹುದಿಕೇರಿ ಇದರ ಆಡಳಿತ ಮಂಡಳಿಗೆ ಸದಸ್ಯರುಗಳನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡಿದೆ.

1. ಶ್ರೀ ಟಿ. ಬಿ. ತಿಮ್ಮಯ್ಯ ತಂದೆ ಬಿದ್ದಪ್ಪ, ನೆಲ್ಯಹುದಿಕೇರಿ ಗ್ರಾಮ ಮತ್ತು ಅಂಚೆ, ಸೋಮವಾರಪೇಟೆ ತಾಲ್ಲೂಕು
2. ಶ್ರೀಮತಿ ಕೆ. ಜೆ. ರುಕ್ಮಿಣಿ ಗಂಡ ಕೆ. ಎಂ. ಜಯಕುಮಾರ್ ನೆಲ್ಯಹುದಿಕೇರಿ ಗ್ರಾಮ ಮತ್ತು ಅಂಚೆ, ಸೋಮವಾರಪೇಟೆ ತಾಲ್ಲೂಕು.
3. ಶ್ರೀ ವೆಂಕಟ ತಂದೆ ನರಸ, ಬೆಟ್ಟರಕಾಡು, ನೆಲ್ಯಹುದಿಕೇರಿ ಗ್ರಾಮ ಮತ್ತು ಅಂಚೆ, ಸೋಮವಾರಪೇಟೆ ತಾಲ್ಲೂಕು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಎಸ್. ಹುಬ್ಬಾಚಾರಿ**

ಪಿ.ಆರ್. 130 ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

**ಅಧಿಸೂಚನೆ**

**ಸಂಖ್ಯೆ: ಸಿಎಂಡಬ್ಲ್ಯೂ 16 ಸಿಎಸ್ಎಸ್ 2003 ಬೆಂಗಳೂರು, ದಿನಾಂಕ: 13ನೇ ಫೆಬ್ರವರಿ 2004**

ಈ ಹಿಂದೆ ಸರ್ಕಾರದಿಂದ ಮಾಡಿರುವ ಎಲ್ಲಾ ನಾಮನಿರ್ದೇಶನಗಳನ್ನು ರದ್ದುಪಡಿಸಿ, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಕಲಂ 29ರ ಉಪ ಕಲಂ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಈ ಕೆಳಕಂಡ ವ್ಯಕ್ತಿಗಳನ್ನು, ತುಮಕೂರು ಜಿಲ್ಲೆ ಕುಣಿಗಲ್ ತಾಲ್ಲೂಕಿನ ಕುಣಿಗಲ್ ಟೌನ್ ಮೀನುಗಾರರ ಸಹಕಾರ ಸಂಘ ನಿ, ಹನುಮಾಪುರ ಇದರ ಆಡಳಿತ ಮಂಡಳಿಗೆ ಸದಸ್ಯರುಗಳನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡಿದೆ.

1. ಶ್ರೀಮತಿ ಜಯಮ್ಮ ಕೋಂ ಸಿದ್ದಗಂಗಯ್ಯ ಕೆ.ಆರ್.ಎಸ್. ಅಗ್ರಹಾರ, ಕುಣಿಗಲ್
2. ಶ್ರೀ ಗಂಗಯ್ಯ ಬಿನ್ ಅಡವಯ್ಯ ಎಸ್. ಸಿ. ಲಾಳಾಪುರ, ಕಸಬ ಹೋಬಳಿ, ಕುಣಿಗಲ್ ತಾಲ್ಲೂಕು
3. ಶ್ರೀ ಗೈಬಾನ್‌ಖಾನ್ ಬಿನ್ ಪೀರ್‌ಖಾನ್, ಕೊತ್ತಿಪುರ ಕಸಬ ಹೋಬಳಿ, ಕುಣಿಗಲ್ ತಾಲ್ಲೂಕು

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಎಸ್. ಹುಚ್ಚಾಚಾರಿ**

ಪಿ.ಆರ್. 131 ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

**ಅಧಿಸೂಚನೆ**

**ಸಂಖ್ಯೆ: ಸಿಎಂಡಬ್ಲ್ಯೂ 18 ಸಿಎಸ್ಎಸ್ 2004 ಬೆಂಗಳೂರು, ದಿನಾಂಕ: 11ನೇ ಫೆಬ್ರವರಿ 2004**

ಈ ಹಿಂದೆ ಸರ್ಕಾರದಿಂದ ಮಾಡಿರುವ ಎಲ್ಲಾ ನಾಮನಿರ್ದೇಶನಗಳನ್ನು ರದ್ದುಪಡಿಸಿ, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಕಲಂ 29ರ ಉಪ ಕಲಂ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಈ ಕೆಳಕಂಡ ವ್ಯಕ್ತಿಗಳನ್ನು, ಹಾವೇರಿ ಜಿಲ್ಲೆ, ಹಾನಗಲ್ ತಾಲ್ಲೂಕಿನ ಹಿರೇಕಣಗಿ ಗ್ರಾಮದ ವ್ಯವಸಾಯ ಸೇವಾ ಸಹಕಾರ ಸಂಘ ನಿ., ಹಿರೇಕಣಗಿ ಇದರ ಆಡಳಿತ ಮಂಡಳಿಗೆ ಸದಸ್ಯರುಗಳನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡಿದೆ.

1. ಶ್ರೀ ರಾಮಣ್ಣಾ ತಿರಕಪ್ಪ ಭಾವಿಮನಿ ಸಾ: ಚಿಕ್ಕೇರಿಹೊಸಳ್ಳಿ
2. ಶ್ರೀ ಸಹದೇವಪ್ಪ ಹನುಮಂತಪ್ಪ ಕಾಳೇರ, ಸಾ: ಬಿದರಕೊಪ್ಪ
3. ಶ್ರೀಮತಿ ಶಿಲಾವತಿ ಕೋಂ ಚಂದ್ರಶೇಖರ ಮಂತಗಿ, ಸಾ: ಹಿರೇಕಣಗಿ

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಎಸ್. ಹುಚ್ಚಾಚಾರಿ**

ಪಿ.ಆರ್. 132 ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

**ಅಧಿಸೂಚನೆ**

**ಸಂಖ್ಯೆ: ಸಿಎಂಡಬ್ಲ್ಯೂ 19 ಸಿಎಸ್ಎಸ್ 2004 ಬೆಂಗಳೂರು, ದಿನಾಂಕ: 13ನೇ ಫೆಬ್ರವರಿ 2004**

ಈ ಹಿಂದೆ ಸರ್ಕಾರದಿಂದ ಮಾಡಿರುವ ಎಲ್ಲಾ ನಾಮನಿರ್ದೇಶನಗಳನ್ನು ರದ್ದುಪಡಿಸಿ, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಕಲಂ 29ರ ಉಪ ಕಲಂ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಈ ಕೆಳಕಂಡ ವ್ಯಕ್ತಿಗಳನ್ನು, ಬಾಗಲಕೋಟೆ ಜಿಲ್ಲೆ ಬೀಳಗಿ ತಾಲ್ಲೂಕಿನ ಗಿರಿಸಾಗರ ಕೃಷಿ ಪತ್ತಿನ ಸಹಕಾರ ಬ್ಯಾಂಕ್ ನಿಯಮಿತ, ಗಿರಿಸಾಗರ, ಇದರ ಆಡಳಿತ ಮಂಡಳಿಗೆ ಸದಸ್ಯರುಗಳನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡಿದೆ.

1. ಶ್ರೀ ಹಣಮಂತಪ್ಪ ಯಂಕಪ್ಪ ಅರಮನಿ,
2. ಶ್ರೀಮತಿ ದುರಗವ್ವ ಗಂಡ ಯಂಕಪ್ಪ ವಡ್ಡರ,
3. ಶ್ರೀಮತಿ ಫಾತಿಮ ದಾವಲಸಾಬ್ ನದಾಫ,

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಎಸ್. ಹುಚ್ಚಾಚಾರಿ**

ಪಿ.ಆರ್. 133 ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

**ಅಧಿಸೂಚನೆ**

**ಸಂಖ್ಯೆ: ಸಿಎಂಡಬ್ಲ್ಯೂ 20 ಸಿಎಸ್ಎಸ್ 2004 ಬೆಂಗಳೂರು, ದಿನಾಂಕ: 13ನೇ ಫೆಬ್ರವರಿ 2004**

ಈ ಹಿಂದೆ ಸರ್ಕಾರದಿಂದ ಮಾಡಿರುವ ಎಲ್ಲಾ ನಾಮನಿರ್ದೇಶನಗಳನ್ನು ರದ್ದುಪಡಿಸಿ, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಕಲಂ 29ರ ಉಪ ಕಲಂ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಈ ಕೆಳಕಂಡ ವ್ಯಕ್ತಿಗಳನ್ನು, ಬಾಗಲಕೋಟೆ ಜಿಲ್ಲೆ ಜಮಖಂಡಿ ತಾಲ್ಲೂಕಿನ ಹಿರೆಪಡಸಲಗಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಬ್ಯಾಂಕ್ ನಿ., ಹಿರೆಪಡಸಲಗಿ ಇದರ ಆಡಳಿತ ಮಂಡಳಿಗೆ ಸದಸ್ಯರುಗಳನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡಿದೆ.

1. ಮಲ್ಲಪ್ಪ ತಾ ಸುಸಲವ್ವ, ಕಾಂಬಳೆ ಸಾ: ಟಕ್ಕೋಡ
2. ವಾಸುದೇವ ವಿಠ್ಠಲ, ನಾವಿ ಸಾ: ಟಕ್ಕಳಕಿ
3. ಶ್ರೀಮತಿ ನೀಲವ್ವ ಬಾಳಪ್ಪ ಕಲ್ಲಳ್ಳಿ, ಸಾ: ಹಿರೆಪಡಸಲಗಿ

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಎಸ್. ಹುಚ್ಚಾಚಾರಿ**

ಪಿ.ಆರ್. 134 ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

## ಅಧಿಸೂಚನೆ

### ಸಂಖ್ಯೆ: ಆಕುಕ 122 ಹೆಚ್ಎಸ್ಹೆಚ್ 2004 ಬೆಂಗಳೂರು, ದಿನಾಂಕ: 16ನೇ ಫೆಬ್ರವರಿ 2004

ವಿಶೇಷ ಆಯ್ಕೆ ಸಮಿತಿಯು ದಿನಾಂಕ: 12.12.2003 ರಂದು ಹೊರಡಿಸಿದ ಅಧಿಸೂಚನೆ ಸಂಖ್ಯೆ: ಡಿಆರ್‌ಸಿ/ 42 (1)/2003-04ರ ಪಟ್ಟಿಯಲ್ಲಿ ಗ್ರಾಮೀಣ ಕೃಪಾಂಕ ರಹಿತ ಆಯ್ಕೆಯಾದ ಪದವೀಧರ ವೈದ್ಯರನ್ನು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಯಾಗಿ ರೂ. 7400-200-8800-260-10880-320-13120 ಗಳ ವೇತನ ಶ್ರೇಣಿಯಲ್ಲಿ ಎರಡು ವರ್ಷಗಳ ಖಾಯಂ ಪೂರ್ವ ಸೇವಾವಧಿಯ ಮೇರೆಗೆ ಹಂಗಾಮಿಯಾಗಿ ಈ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಈ ಅಧಿಸೂಚನೆಗೆ ಲಗತ್ತಿಸಿದ ಅನುಬಂಧದಲ್ಲಿ ಸೂಚಿಸಿರುವಂತೆ ನೇಮಿಸಲಾಗಿದೆ.

1. ಈ ಉದ್ಯೋಗ ನೀಡಿಕೆಯು ಅಭ್ಯರ್ಥಿಯ ಪೂರ್ವಾಪರ ನಡವಳಿಕೆ ಬಗ್ಗೆ ಪೊಲೀಸು ವರದಿ ತನಿಖೆಗೆ ಒಳಪಟ್ಟಿರುತ್ತದೆ.

2. ನೇಮಕಾತಿ ಹೊಂದಿದ ಅಭ್ಯರ್ಥಿಯು ಎರಡು ವರ್ಷಗಳ ಕಾಲ ಖಾಯಂ ಪೂರ್ವ ಸೇವಾವಧಿಯಲ್ಲಿ ಹುದ್ದೆಗೆ ನಿಗದಿಪಡಿಸಲಾಗಿರುವ ಇಲಾಖಾ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಬೇಕು.

3. ಈ ಅಧಿಸೂಚನೆ ತಲುಪಿದ ತಕ್ಷಣ ಅಥವಾ ಈ ಅಧಿಸೂಚನೆಯನ್ನು ನೋಂದಣಿ ಅಂಚೆಯಲ್ಲಿ ಕಳುಹಿಸಿದ ದಿನಾಂಕದಿಂದ 15 ದಿನಗಳೊಳಗಾಗಿ ಅಭ್ಯರ್ಥಿಯು ನೇಮಕಾತಿ ಮಾಡಿರುವ ಸ್ಥಳದಲ್ಲಿ ಕರ್ತವ್ಯಕ್ಕೆ ಹಾಜರಾಗಬೇಕು. ಹಾಜರಾಗದಿದ್ದಲ್ಲಿ ನೇಮಕಾತಿಯು ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977 ರ ನಿಯಮ 18(3) ರನ್ವಯ ಯಾವುದೇ ಸೂಚನೆ ಇಲ್ಲದೆ ರದ್ದಾಗುವುದು.

4. ಅಭ್ಯರ್ಥಿಯು ಕೆಲಸಕ್ಕೆ ಹಾಜರಾಗುವಾಗ ಎಲ್ಲಾ ಮೂಲ ದಾಖಲೆಗಳನ್ನು ಅಂದರೆ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಹುದ್ದೆಗೆ ಗೊತ್ತುಪಡಿಸಿರುವ ವಿದ್ಯಾರ್ಹತೆಯ ಪ್ರಮಾಣ ಪತ್ರ, ಜನ್ಮ ದಿನಾಂಕದ ದಾಖಲೆ ಇತ್ಯಾದಿಗಳನ್ನು ಆಯಾ ಜಿಲ್ಲೆಯ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಅಧಿಕಾರಿ: ಜಿಲ್ಲಾ ಸರ್ಜನ್‌ಗಳ ಮುಂದೆ ಹಾಜರುಪಡಿಸಿ, ಅವರಿಂದ ಚಲನಾದೇಶವನ್ನು ಪಡೆದು ನೇಮಿಸಿರುವ ಸ್ಥಳದಲ್ಲಿ ಕೆಲಸಕ್ಕೆ ಹಾಜರಾಗತಕ್ಕದ್ದು.

5. ಅಭ್ಯರ್ಥಿಯು ಇಬ್ಬರು ಗೌರವಾನ್ವಿತ ವ್ಯಕ್ತಿಗಳಿಂದ ನಡವಳಿಕೆ ಪ್ರಮಾಣ ಪತ್ರವನ್ನು ಪಡೆದು ಕೆಲಸಕ್ಕೆ ಹಾಜರಾಗುವ ಸಮಯದಲ್ಲಿ ಹಾಜರು ಪಡಿಸಬೇಕು.

6. ಸ್ನಾತಕೋತ್ತರ ವ್ಯಾಸಂಗ ಮಾಡುತ್ತಿರುವ ಅಭ್ಯರ್ಥಿಗಳಿಗೆ ಸ್ನಾತಕೋತ್ತರ ವ್ಯಾಸಂಗವನ್ನು ಮುಂದುವರಿಸಲು ಅವಕಾಶವಿರುವುದಿಲ್ಲ.

ಅಭ್ಯರ್ಥಿಯ ಜೇಷ್ಠತೆಯು ವಿಶೇಷ ಆಯ್ಕೆ ಸಮಿತಿಯು ನೀಡಿರುವ ಆಯ್ಕೆ ಪಟ್ಟಿಯ ಕ್ರಮಾಂಕದಂತೆ ಇರುತ್ತದೆ.

ನೇಮಕಾತಿ ಮಾಡಿರುವ ಸ್ಥಳದ ಮಾರ್ಪಾಡಿಗಾಗಿ ಅಥವಾ ರದ್ದತಿಗಾಗಿ ಯಾವುದೇ ಮನವಿಗಳನ್ನು ಯಾವುದೇ ಕಾರಣಕ್ಕಾಗಲೀ ಪುರಸ್ಕರಿಸಲಾಗುವುದಿಲ್ಲ.

ಸಂಬಂಧಪಟ್ಟ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿ: ಜಿಲ್ಲಾ ಶಸ್ತ್ರ ಚಿಕಿತ್ಸಕ: ಶಸ್ತ್ರ ಚಿಕಿತ್ಸಕರು ಈಗ ನೇಮಕಾತಿ ಹೊಂದಿರುವ ವೈದ್ಯಾಧಿಕಾರಿಗಳ ಜನ್ಮ ದಿನಾಂಕಕ್ಕೆ ಸಂಬಂಧಿಸಿದ ದಾಖಲಾತಿಗಳನ್ನು ಪರಿಶೀಲಿಸಿ, ದೃಢೀಕೃತ ದಾಖಲಾತಿಗಳನ್ನು **ಮಹಾಲೇಖಪಾಲರಿಗೆ ಮತ್ತು ಸರ್ಕಾರಕ್ಕೆ ಒಂದು ವಾರದೊಳಗಾಗಿ ಸಲ್ಲಿಸತಕ್ಕದ್ದು.**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕಾಶೀನಾಥ ಪಟವಾಡಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

### ಸರ್ಕಾರಿ ಅಧಿಸೂಚನೆ ಸಂಖ್ಯೆ: ಆಕುಕ 122 ಹೆಚ್ಎಸ್ಹೆಚ್ 2004 ದಿನಾಂಕ: 16ನೇ ಫೆಬ್ರವರಿ 2004ಕ್ಕೆ

### ಅನುಬಂಧ

| ಕ್ರಮ ಸಂಖ್ಯೆ | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | |
|---|---|---|
| 1. | ಡಾ: ವಿಶ್ವನಾಥ್ ಆರ್., ಎಂಎಸ್(ಜಿಎಸ್)<br>ನಂ: 97, ಮುನೇಶ್ವರ ಬ್ಲಾಕ್<br>ಮಂಜುನಾಥ ನಿಲಯ, ಚೋಳನಾಯಕನ ಹಳ್ಳಿ,<br>ಆರ್. ಟಿ. ನಗರ ಅಂಚೆ, ಬೆಂಗಳೂರು-32 | ಸಾರ್ವಜನಿಕ ಆಸ್ಪತ್ರೆ, ಚನ್ನಪಟ್ಟಣ,<br>ಬೆಂಗಳೂರು ಗ್ರಾಮಾಂತರ ಜಿಲ್ಲೆ. |

| ಕ್ರಮ ಸಂಖ್ಯೆ | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | |
|---|---|---|
| 2. | ಡಾ: ಶ್ರೀನಿವಾಸ ಬಿ. ಜಿ.<br>ನಂ. 24/37, ಮೂಕಾಂಬಿಕಾ ದೇವಸ್ಥಾನದ ರಸ್ತೆ,<br>ಹೊಸಕೆರೆ ಹಳ್ಳಿ, ಬೆಂಗಳೂರು-85 | ಸಾರ್ವಜನಿಕ ಆಸ್ಪತ್ರೆ,, ಹೊಸಕೋಟೆ,<br>ಬೆಂಗಳೂರು ಗ್ರಾಮಾಂತರ ಜಿಲ್ಲೆ. |
| 3. | ಡಾ: ಸುರೇಶ್ ಬಸರ್‌ಕೋಡ್, ಎಂಎಸ್ (ಜಿಎಸ್)<br>ತಂದೆ: ಐ. ವಿ. ಬಸರ್‌ಕೋಡ್<br>ಮಾನ್ವಿ, ಗ್ರಾಮೀಣ ಸಹಕಾರಿ ಬ್ಯಾಂಕ್<br>ಮಾನ್ವಿ, ರಾಯಚೂರು ಜಿಲ್ಲೆ -584123 | ಸಾರ್ವಜನಿಕ ಆಸ್ಪತ್ರೆ, ಹುನಗುಂದ,<br>ಬಾಗಲಕೋಟೆ ಜಿಲ್ಲೆ. |
| 4. | ಡಾ: ಬಾಲಸುಬ್ರಹ್ಮಣ್ಯ ಎಸ್., ಡಿಒಎಂಎಸ್<br>ಲಯನ್ಸ್ ಕಣ್ಣಿನ ಆಸ್ಪತ್ರೆ<br>ಹೊಳೆನರಸೀಪುರ, ಹಾಸನ ಜಿಲ್ಲೆ-573211 | ಜಿಲ್ಲಾ ಆಸ್ಪತ್ರೆ, ಹಾಸನ. |
| 5. | ಡಾ: ನಾಗಭೂಷಣ ಎಂ. ಎಂಎಸ್(ಜಿಎಸ್)<br>ನಂ. 7, 'ವೈಭವ ನಿಲಯ'<br>1ನೇ ಅಡ್ಡರಸ್ತೆ, ಅಂಜನಾದ್ರಿ ಬಡಾವಣೆ<br>ಕೋಣನಕುಂಟೆ, ಬೆಂಗಳೂರು-62 | ಸಾರ್ವಜನಿಕ ಆಸ್ಪತ್ರೆ, ಗುಬ್ಬಿ,<br>ತುಮಕೂರು ಜಿಲ್ಲೆ |
| 6. | ಡಾ: ಹರಿಪ್ರಸನ್ನ ಎಸ್. ಎಂಡಿ (ಜಿಎಂ)<br>ನಂ. 1947/ಎ, 5ನೇ ಅಡ್ಡರಸ್ತೆ,<br>ಸೋಮೇಶ್ವರಪುರಂ,<br>ತುಮಕೂರು ಜಿಲ್ಲೆ-572102. | ಸಾರ್ವಜನಿಕ ಆಸ್ಪತ್ರೆ, ಪಾವಗಡ<br>ತುಮಕೂರು ಜಿಲ್ಲೆ |
| 7. | ಡಾ: ಲೋಹಿತ ಎಂ. ಎನ್.<br>ತಂದೆ: ಎಂ. ನಾಗಪ್ಪ, ಅಮೃತ,<br>ಶಿವಮೊಗ್ಗ ರಸ್ತೆ, ಬಾಲಾಜಿ ಎಣ್ಣೆ ಮಿಲ್ ಹತ್ತಿರ,<br>ವಿದ್ಯಾನಗರ. 8ನೇ ಬ್ಲಾಕ್,<br>ಹರಿಹರ, ದಾವಣಗೆರೆ-577 601 | ಪ್ರಾಥಮಿಕ ಆರೋಗ್ಯ ಕೇಂದ್ರ,<br>ಕುಪ್ಪೆಲೂರು, ರಾಣೆಬೆನ್ನೂರು ತಾಲ್ಲೂಕು,<br>ಹಾವೇರಿ ಜಿಲ್ಲೆ. |
| 8. | ಡಾ: ಜವಳಿ ಸಿ. ಎಸ್.<br>ಕಮ್ಮಾರ ಕಟ್ಟಡ, ಗುಡೂರು<br>ಹುನಗುಂದ ತಾಲ್ಲೂಕು.<br>ಬಾಗಲಕೋಟೆ ಜಿಲ್ಲೆ-587 202 | ಜಿಲ್ಲಾ ಆಸ್ಪತ್ರೆ,<br>ಬಾಗಲಕೋಟೆ ಜಿಲ್ಲೆ |
| 9. | ಡಾ: ಮಹಂತೇಶ್ ಕೆ. ಮಠ್<br>ಕೇ: ಎಸ್. ಡಿ. ಹಿರೇಮಠ್<br>ಫ್ಲಾಟ್ ನಂ: 130, ನಿರ್ಮಲ ಹೌಸಿಂಗ್ ಕಾಲೋನಿ<br>ರಾಣಿಚೆನ್ನಮ್ಮ ನಗರದ ಹತ್ತಿರ<br>ಸತ್ತಾಪುರ, ಧಾರವಾಡ ಜಿಲ್ಲೆ-580 001 | ಜಿಲ್ಲಾ ಆಸ್ಪತ್ರೆ,<br>ಧಾರವಾಡ. |
| 10. | ಡಾ: ಪ್ರವೀಣ್ ಬಿ. ಕುಲಕರ್ಣಿ, ಎಂಎಸ್ (ಇಎನ್‌ಟಿ)<br>ಕೇ: ಬಿ. ಬಿ. ಕುಲಕರ್ಣಿ<br>ಫ್ಲಾಟ್ ನಂ. 668, ಸೆಕ್ಟರ್ ನಂ. 5, ಶ್ರೀನಗರ,<br>ಮಲಮಾರುತಿ ಬಡಾವಣೆ, ಬೆಳಗಾಂ ಜಿಲ್ಲೆ-16 | ಸಾರ್ವಜನಿಕ ಆಸ್ಪತ್ರೆ, ಸೌಂದತ್ತಿ,<br>ಬೆಳಗಾಂ ಜಿಲ್ಲೆ |
| 11. | ಪ್ರಭುದೇವ ಬಿ. ಜಿ.<br>ನಂ: 4081, ಪ್ರಸನ್ನ ನಿಲಯ,<br>14ನೇ ಕ್ರಾಸ್, ಆಂಜನೇಯ ಬಡಾವಣೆ, ದಾವಣಗೆರೆ-577004 | ಜಿಲ್ಲಾ ಆಸ್ಪತ್ರೆ,<br>ದಾವಣಗೆರೆ |
| 12. | ಡಾ: ಕೊಟೆಣ್ಣವರ್ ಎಂ. ಎಸ್. ಎಂಎಸ್(ಜಿಎಸ್)<br>ಎಂಐ-85, ಆದರ್ಶ ನಗರ, ಹೊಸ ಹುಡ್ಕೋ, ಬಿಜಾಪುರ ಜಿಲ್ಲೆ-3 | ಸಾರ್ವಜನಿಕ ಆಸ್ಪತ್ರೆ, ಮುದ್ದೇಬಿಹಾಳ್<br>ಬಿಜಾಪುರ ಜಿಲ್ಲೆ |
| 13. | ಡಾ: ಸನತ್ ಭಂಡಾರಿ ಎನ್. ಜಿ.ಎಸ್.<br>ಕೇ: ಕೆ. ಎಸ್. ಭಂಡಾರಿ,<br>ಮನೆ ಸಂ: ಸಿ-81(1), ಹೆಗ್ಗೋಡ್ಲು ಅಂಚೆ, ಮಾವಿನಕೋಡ್ಲು, ಕುಲ್ಲಂಗಿ<br>ವಿಲೇಜ್, ಕುಂದಾಪುರ ತಾಲ್ಲೂಕು, ಉಡುಪಿ ಜಿಲ್ಲೆ. | ಸಾರ್ವಜನಿಕ ಆಸ್ಪತ್ರೆ, ಗೋಣಿಕೊಪ್ಪ<br>ಕೊಡಗು ಜಿಲ್ಲೆ. |

| ಕ್ರಮ ಸಂಖ್ಯೆ | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | |
|---|---|---|
| 14. | ಡಾ: ದಯಾನಂದ ವಿ. ಪಿ. ಡಿ. ಅನಸ್ತೇಶಿಯಾ<br>ನಂ. 169/ ಬಿ, 4ನೇ ಮುಖ್ಯರಸ್ತೆ.<br>ಜೆ. ಪಿ. ನಗರ, 3ನೇ ಹಂತ, ಬೆಂಗಳೂರು-78 | ಸಾರ್ವಜನಿಕ ಆಸ್ಪತ್ರೆ, ಮಧುಗಿರಿ,<br>ತುಮಕೂರು ಜಿಲ್ಲೆ |
| 15. | ಡಾ: ಪೂರ್ಣಿಮ ವಿ., ಡಿಜಿಓ: ಡಿಎನ್‌ಬಿ<br>ನಂ: 1686, ರಾಜಾಜಿನಗರ 3ನೇ ಹಂತ,<br>ಪ್ರಕಾಶನಗರ, ಬೆಂಗಳೂರು-21 | ಸಾರ್ವಜನಿಕ ಆಸ್ಪತ್ರೆ, ಚನ್ನಪಟ್ಟಣ,<br>ಬೆಂಗಳೂರು ಗ್ರಾಮಾಂತರ ಜಿಲ್ಲೆ |
| 16. | ಡಾ: ಸುರೇಶ್ ಹೆಚ್. ಹೆಚ್. ಡಿಒಎಂ.<br>ನಂ: 98, 13ನೇ ಮುಖ್ಯ ರಸ್ತೆ<br>ಹನುಮಂತ ನಗರ, ಬೆಂಗಳೂರು-50 | ಸಾರ್ವಜನಿಕ ಆಸ್ಪತ್ರೆ, ಚಳ್ಳಕೆರೆ,<br>ಚಿತ್ರದುರ್ಗ ಜಿಲ್ಲೆ |
| 17. | ಡಾ: ಶ್ರೀಹರ್ಷ ಜಿ. ಹೆಚ್.<br>ಸಿದ್ದರ ರಸ್ತೆ, ರಂಗೇನಹಳ್ಳಿ,<br>ತರಿಕೆರೆ ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ | ಜಿಲ್ಲಾ ಆಸ್ಪತ್ರೆ,<br>ಚಿಕ್ಕಮಗಳೂರು. |
| 18. | ಡಾ: ಭಾರತಿ ಕೆ. ಆರ್.<br>ನಂ. 11/ಎ, 2ನೇ ಮುಖ್ಯರಸ್ತೆ<br>ಪರಮಹಂಸ ರಸ್ತೆ, ಯಾದವಗಿರಿ, ಮೈಸೂರು-20 | ಪ್ರಾಥಮಿಕ ಆರೋಗ್ಯ ಕೇಂದ್ರ, ಕಬ್ಬಳ್ಳಿ,<br>ಗುಂಡ್ಲುಪೇಟೆ ತಾಲ್ಲೂಕು ಚಾಮರಾಜನಗರ<br>ಜಿಲ್ಲೆ |
| 19. | ಡಾ: ರವಿ ಹೆಚ್. ಎಸ್. ಡಿ. ಆರ್ಥೋ<br>ನಂ. 105/ಕೆ, ಎನ್. ಬ್ಲಾಕ್,<br>ಕುವೆಂಪುನಗರ, ಮೈಸೂರು-23 | ಜಿಲ್ಲಾ ಆಸ್ಪತ್ರೆ, ಹಾಸನ. (ಡಿಸಿಎಂಒ<br>ಹುದ್ದೆಯ ಎದುರು) |
| 20. | ಡಾ: ವರದರಾಜ್ ಕೆ.<br>ನಂ. 242, 2ನೇ ಮುಖ್ಯ ರಸ್ತೆ,<br>2ನೇ ಹಂತ, ಎಇಸಿಎಸ್ ಕಾಲೋನಿ,<br>ಆರ್‌ಎಂವಿ 2ನೇ ಹಂತ, ಗೆದ್ದಲಹಳ್ಳಿ, ಬೆಂಗಳೂರು-94 | ಟಿ. ಬಿ. ಆಸ್ಪತ್ರೆ,<br>ಹಳೇ ಮದ್ರಾಸ್ ರಸ್ತೆ, ಬೆಂಗಳೂರು |
| 21. | ಡಾ: ಮಧು ಹೆಚ್. ಎಸ್. ಡಿಎನ್‌ಬಿ (ಪೀಡಿಯಾ)<br>ನಂ. 2168, ಬಸವೇಶ್ವರ ಮುಖ್ಯ ರಸ್ತೆ,<br>ಲಕ್ಷ್ಮೀಪುರಂ ಅಂಚೆ ಪೆಟ್ಟಿಗೆ, ಕೆ.ಆರ್. ಮೊಹಲ್ಲಾ, ಮೈಸೂರು-4 | ಸಾರ್ವಜನಿಕ ಆಸ್ಪತ್ರೆ, ಪುತ್ತೂರು,<br>ದಕ್ಷಿಣ ಕನ್ನಡ ಜಿಲ್ಲೆ |
| 22. | ಡಾ: ಭಾರತಿ ಕೆ. ಎಸ್. ಡಿಎನ್‌ಸಿ ಹೆಚ್.<br>ಗಂಡ: ಡಾ: ಪಿ. ರಮೇಶ್ ಕುಮಾರ್<br>ಸೈಂಟಿಸ್ಟ್, ನಿರ್ದೇಶಕರ ಕಛೇರಿ,<br>ಸಿ.ಎಫ್.ಟಿ.ಆರ್.ಐ ಮೈಸೂರು-13 | ಸಾರ್ವಜನಿಕ ಆಸ್ಪತ್ರೆ, ನಾಗಮಂಗಲ,<br>ಮಂಡ್ಯ ಜಿಲ್ಲೆ |
| 23. | ಡಾ: ಕಾರ್ತಿಕ್ ಎಸ್. ಎಂಎಸ್ (ಇಎನ್‌ಟಿ)<br>ನಂ. 530, 16ನೇ ಕ್ರಾಸ್.<br>ಇಂದಿರಾನಗರ 2ನೇ ಹಂತ, ಬೆಂಗಳೂರು-38. | ಸಾರ್ವಜನಿಕ ಆಸ್ಪತ್ರೆ, ದೇವನಹಳ್ಳಿ,<br>ಬೆಂಗಳೂರು ಗ್ರಾಮಾಂತರ ಜಿಲ್ಲೆ |
| 24. | ಡಾ: ಶಶಿಕಲಾ ಕೆ. ಎಸ್‌ಟಿಡಿ (ಸ್ಕಿನ್)<br>ಫ್ಲಾಟ್ ನಂ. 201, ಸ್ಮೈ ಅಪಾರ್ಟ್‌ಮೆಂಟ್<br>9ನೇ ಕ್ರಾಸ್, ಇಂದಿರಾನಗರ 1 ನೇ ಹಂತ, ಬೆಂಗಳೂರು-38 | ಕೇಂದ್ರ ಕಾರಾಗೃಹ ಚಿಕಿತ್ಸಾಲಯ<br>ಬೆಂಗಳೂರು. |
| 25. | ಡಾ: ವಿಶ್ವನಾಥ್‌ಗೌಡ ಎಂ. ಜಿ.<br>ನಂ. 99, ಶ್ರೀಕೃಷ್ಣ 12ನೇ ಮುಖ್ಯ ರಸ್ತೆ,<br>ಬಿನ್ನಿ ಲೇಔಟ್, ವಿಜಯನಗರ 2ನೇ ಹಂತ, ಬೆಂಗಳೂರು-40 | ಟಿ. ಬಿ. ಆಸ್ಪತ್ರೆ, ಹಳೇ ಮದ್ರಾಸ್ ರಸ್ತೆ,<br>ಬೆಂಗಳೂರು |
| 26. | ಡಾ: ಮಲ್ಲಿಕಾರ್ಜುನ ಕೀರ್ತಿ ಬಿ. ಡಿಜಿಒ<br>ವಿ. ಪಿ. ಬಡಾವಣೆ, ಮುಖ್ಯ ರಸ್ತೆ, ಮಾರ್ಕೆಟ್ ಹತ್ತಿರ,<br>ಚಿತ್ರದುರ್ಗ ಜಿಲ್ಲೆ | ಪ್ರಾಥಮಿಕ ಆರೋಗ್ಯ ಕೇಂದ್ರ,<br>ಭರಮಸಾಗರ, ಚಿತ್ರದುರ್ಗ ಜಿಲ್ಲೆ, |
| 27. | ಡಾ: ರಾಮಮೂರ್ತಿ ಎಂ. ಜಿ. ಡಿಒಡಿಎನ್‌ಬಿ<br>ನಂ. 2, ಮಂದಾರ, 1ನೇ ಕ್ರಾಸ್.<br>2ನೇ ಮತ್ತು 3ನೇ ಮುಖ್ಯರಸ್ತೆಯ ಮಧ್ಯೆ ಸೆಕ್ಟರ್-2, ನೋಬೋನಗರ,<br>ಬನ್ನೇರುಘಟ್ಟ ರಸ್ತೆ ಎದುರು, ಬೆಂಗಳೂರು-76 | ಎಸ್.ಎನ್. ಆರ್. ಆಸ್ಪತ್ರೆ,<br>ಕೋಲಾರ ಜಿಲ್ಲೆ. |

| ಕ್ರಮ ಸಂಖ್ಯೆ | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | |
|---|---|---|
| 28. | ಡಾ: ವಿಜಯಕಾಂತಿ ಆರ್. ಎಂಎಸ್ (ಆರ್ಥೋ)<br>ಕಾಂತಿ ನರ್ಸಿಂಗ್ ಹೋಂ, ಬಾಗಲಕೋಟೆ ಜಿಲ್ಲೆ-587101. | ಸಾರ್ವಜನಿಕ ಆಸ್ಪತ್ರೆ, ಬೀಳಗಿ,<br>ಬಾಗಲಕೋಟೆ ಜಿಲ್ಲೆ |
| 29. | ಡಾ: ವಿಜೇಂದ್ರ ರಾವ್ ವಿ. ಡಿ. ಅನಸ್ತೇಶಿಯಾ<br>ನಂ: 26/1, 40ನೇ ಎ-ಕ್ರಾಸ್, ಜಯನಗರ 9ನೇ ಬ್ಲಾಕ್, 26ನೇ ಮುಖ್ಯರಸ್ತೆ ಬೆಂಗಳೂರು-69 | ಸಾರ್ವಜನಿಕ ಆಸ್ಪತ್ರೆ, ಕಡೂರು,<br>ಚಿಕ್ಕಮಗಳೂರು ಜಿಲ್ಲೆ |
| 30. | ಡಾ: ಶ್ರೀರಂಗ ಎನ್. ಎಂಎಸ್ (ಆರ್ಥೋ)<br>ನಂ. 1111, 35ನೇ ಡಿ. ಕ್ರಾಸ್ ರಸ್ತೆ, ಜಯನಗರ 4ನೇ ಟಿ. ಬ್ಲಾಕ್, ಬೆಂಗಳೂರು-41 | ಜಿಲ್ಲಾ ವೆನ್ಲಾಕ್ ಆಸ್ಪತ್ರೆ, ಮಂಗಳೂರು,<br>ದಕ್ಷಿಣ ಕನ್ನಡ ಜಿಲ್ಲೆ. |
| 31. | ಡಾ: ಸುಪರ್ಣ ಕೆ.<br>ನಂ. ಎ/4, ಬಸವೇಶ್ವರ ರಸ್ತೆ, ಸೋಮವಾರ ಪೇಟೆ,<br>ಉತ್ತರ ಕೊಡಗು-571 236 | ಜಿಲ್ಲಾ ಆಸ್ಪತ್ರೆ, ಕೊಡಗು. |
| 32. | ಡಾ: ಭಾಸ್ಕರ ಕೆ. ಎಂಎಸ್ (ಆರ್ಥೋ)<br>ನಂ. 2513/ಎ, 100 ಅಡಿ ರಸ್ತೆ, ಗಾಂಧಿನಗರ 1ನೇ ಕ್ರಾಸ್,<br>ಮಂಡ್ಯ ಜಿಲ್ಲೆ-571 401 | ಸಾರ್ವಜನಿಕ ಆಸ್ಪತ್ರೆ, ಮದ್ದೂರು,<br>ಮಂಡ್ಯ ಜಿಲ್ಲೆ |
| 33. | ಡಾ: ಅನಂತಿ ಎಸ್. ಎಂಡಿ (ಒಬಿಜಿ)<br>ನಂ. 1549/10, ಶ್ರೀರಾಮ ನಿಲಯ, ವ್ಯಾಸರ ಮಠ ರಸ್ತೆ, ಫೋರ್ಟ್,<br>ಚನ್ನಪಟ್ಟಣ, ಬೆಂಗಳೂರು ಗ್ರಾ ಜಿಲ್ಲೆ-571 501. | ಸಮುದಾಯ ಆರೋಗ್ಯ ಕೇಂದ್ರ, ಗುಬ್ಬಿ<br>ತುಮಕೂರು ಜಿಲ್ಲೆ |
| 34. | ಡಾ: ಚಂಪಾ ಎ.<br>ನಂ. 214/ಎ, 25/1, 9ನೇ ಮುಖ್ಯರಸ್ತೆ ಎಸ್.ವಿ. ದೇವಸ್ಥಾನದ ರಸ್ತೆ, ಶ್ರೀನಗರ, ಬೆಂಗಳೂರು-50 | ಪ್ರಾಥಮಿಕ ಆರೋಗ್ಯ ಕೇಂದ್ರ, ಅಜ್ಜಂಪುರ,<br>ತರಿಕೆರೆ ತಾಲ್ಲೂಕು ಚಿಕ್ಕಮಗಳೂರು ಜಿಲ್ಲೆ |
| 35. | ಡಾ: ಪೂರ್ಣಿಮಾ ಎನ್. ಬಯೋಕೆಮೆಸ್ಟ್ರಿ,<br>ನಂ. 108- ವೈ, 4ನೇ ಮುಖ್ಯರಸ್ತೆ, 4ನೇ ಹಂತ, 7ನೇ ಬ್ಲಾಕ್, ಬನಶಂಕರಿ 3ನೇ ಹಂತ, ಬೆಂಗಳೂರು-85 | ಎಸ್.ಎನ್.ಆರ್. ಆಸ್ಪತ್ರೆ,<br>ಕೋಲಾರ. |
| 36. | ಡಾ: ಶೈಲಜಾ ಎಸ್. ಬದ್ರಾಶೆಟ್ಟಿ, ಡಿಜಿಓ<br>ಕೇ: ಬಲಾತ್ಕಾರ್‌ದ ತಲಾಸ್ ರಸ್ತೆ, ಪೋಸ್ಟ್ ಆಫೀಸ್ ಹಿಂಭಾಗ, ಗುಂಜ, ಭಾಲ್ಕಿ ಬೀದರ್ ಜಿಲ್ಲೆ. | ಸಾರ್ವಜನಿಕ ಆಸ್ಪತ್ರೆ, ಅಫ್ಜಲ್‌ಪುರ,<br>ಗುಲ್ಬರ್ಗಾ ಜಿಲ್ಲೆ |
| 37. | ಡಾ: ಸುಧರಾಣಿ ಸಿ.ಎನ್. ಡಿಜಿಓ<br>ನಂ: 578, ಗುಲ್‌ಪೇಟ್, ಕೋಲಾರ ಜಿಲ್ಲೆ. | ಜಿಲ್ಲಾ ಆಸ್ಪತ್ರೆ,<br>ಕೋಲಾರ |
| 38. | ಡಾ: ಭಾರತಿ ಜಿ. ಡಿಪಿಎಂ.<br>ತಾಯಿ: ಡಾ: ಸಿ.ಬಿ. ಲಕ್ಷ್ಮಿ<br>ನಂ: 36, ಗೋಲ್ಡ್‌ಸ್ಮಿತ್ ರಸ್ತೆ, ಬಳ್ಳಾರಿ ಜಿಲ್ಲೆ-583 101. | ಜಿಲ್ಲಾ ಆಸ್ಪತ್ರೆ,<br>ಬಳ್ಳಾರಿ |
| 39. | ಡಾ: ಸುಮಾ ಎಸ್.ಆರ್. ಇಎನ್‌ಟಿ<br>ಪಾರ್ವತಿ ನಿಲಯ, ದೊಡ್ಡಪೇಟೆ, ಹೊಸದುರ್ಗ, ಚಿತ್ರದುರ್ಗ-577 527 | ಜಿಲ್ಲಾ ಆಸ್ಪತ್ರೆ,<br>ಚಿತ್ರದುರ್ಗ. |
| 40. | ಡಾ: ಜಯಶ್ರೀ ಎಸ್. ಸೀರಿ,<br>ಎಂಡಿ (ಕಮ್ಯುನಿಟಿ ಮೆಡಿಸಿನ್) 315/ಎ, 2ನೇ ಬ್ಲಾಕ್, 3ನೇ ಹಂತ, ಬಸವೇಶ್ವರ ನಗರ, ಬೆಂಗಳೂರು-79 | ಪ್ರಾಥಮಿಕ ಆರೋಗ್ಯ ಕೇಂದ್ರ, ತಡಸಿಘಟ್ಟ<br>ನೆಲಮಂಗಲ, ಬೆಂಗಳೂರು ಗ್ರಾಮಾಂತರ ಜಿಲ್ಲೆ |
| 41. | ಡಾ: ಶಾಂತಲಾ ಜಿ. ಬಿ. ಎಂಡಿ (ಮೈಕ್ರೋ)<br>ನಂ. 217, ಕೃಷ್ಣಾ ಎ-1ನೇ ಬ್ಲಾಕ್, ನ್ಯಾಷನಲ್ ಗೇಮ್ಸ್ ವಿಲೇಜ್, ಕೋರಮಂಗಲ, ಬೆಂಗಳೂರು | ಸಾರ್ವಜನಿಕ ಆಸ್ಪತ್ರೆ, ಕುಶಾಲನಗರ,<br>ಕೊಡಗು ಜಿಲ್ಲೆ |
| 42. | ಡಾ: ಗಾಯತ್ರಿ ಎಲ್. ಪಾಟೀಲ್, ಎಂಡಿ (ಒಬಿಜಿ)<br>ಕೇ: ಎಸ್.ಎಸ್. ಪಾಟೀಲ್, ಎಂಎಲ್ಎ,<br>ಕಲಕೇರಿ ಅಂಚೆ, ಮುಂಡರಗಿ ತಾಲ್ಲೂಕು ಗದಗ ಜಿಲ್ಲೆ. | ಸಾರ್ವಜನಿಕ ಆಸ್ಪತ್ರೆ,<br>ಲಕ್ಷ್ಮೇಶ್ವರ, ಗದಗ ಜಿಲ್ಲೆ. |
| 43. | ಡಾ: ಆರತಿ ಜೆ. ಡಿಜಿಓ<br>ನಂ. 333, 16ನೇ ಕ್ರಾಸ್,<br>ಆರ್‌ಎಂವಿ 2ನೇ ಹಂತ, ಬೆಂಗಳೂರು-94 | ಸಾರ್ವಜನಿಕ ಆಸ್ಪತ್ರೆ, ಬಂಗಾರುಪೇಟೆ,<br>ಕೋಲಾರ ಜಿಲ್ಲೆ. |

| ಕ್ರಮ ಸಂಖ್ಯೆ | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | |
|---|---|---|
| 44. | ಡಾ: ರಾಜೇಶ್ವರಿ ಕದರಮಂಡಲಗಿ<br>ಕೇ: ಡಾ: ಅನಿಲ್ ಕುಮಾರ್ ಬೆನ್ನೂರು, ಸುರಕ್ಷಾ ಆಸ್ಪತ್ರೆ, ಕುಬಸದ್ ಕಾಂಪ್ಲೆಕ್ಸ್, ಬಸ್‌ಸ್ಟಾಂಡ್ ರಸ್ತೆ, ರಾಣೆಬೆನ್ನೂರು, ಹಾವೇರಿ ಜಿಲ್ಲೆ-581114. | ಜಿಲ್ಲಾ ಆಸ್ಪತ್ರೆ, ಹಾವೇರಿ |
| 45. | ಡಾ: ಪ್ರತಿಭಾ ಜೆ. ಪಿ. ಡಿವಿಡಿ.<br>ನಂ. ಬಿ/21, ಬಾಪೂಜಿ ವಿದ್ಯಾನಗರ, ದಾವಣಗೆರೆ ಜಿಲ್ಲೆ-577005. | ಸಾರ್ವಜನಿಕ ಆಸ್ಪತ್ರೆ, ಶಿಕಾರಿಪುರ, ಶಿವಮೊಗ್ಗ ಜಿಲ್ಲೆ |
| 46. | ಡಾ: ಶ್ರೀಲಕ್ಷ್ಮಿ ಜಿ. ಎಂಡಿ (ಒಬಿಜಿ)<br>ತಂದೆ: ಎಸ್. ಗುರುರಾಜ ರಾವ್,<br>ನಂ. 6, 1ನೇ ಕ್ರಾಸ್, ಹಳೆ ಮೈಸೂರು ಬೆಂಗಳೂರು ರಸ್ತೆ,<br>ಸುಭಾಷ್‌ನಗರ, ಮೈಸೂರು-7 | ಸಾರ್ವಜನಿಕ ಆಸ್ಪತ್ರೆ, ಚನ್ನಪಟ್ಟಣ ಬೆಂಗಳೂರು ಗ್ರಾಮಾಂತರ ಜಿಲ್ಲೆ |
| 47. | ಡಾ: ಅಖಿಲಾ ಎಸ್. ಡಿ. ಅನಸ್ತೇಶಿಯೂ<br>ನಂ. 11, 1ನೇ ಮುಖ್ಯ ರಸ್ತೆ, ಕೊಂಟೂರು ರಸ್ತೆ, ಗೋಕುಲಂ 3ನೇ ಹಂತ, ಮೈಸೂರು. | ಸಾರ್ವಜನಿಕ ಆಸ್ಪತ್ರೆ, ಹುಣಸೂರು, ಮೈಸೂರು ಜಿಲ್ಲೆ. |
| 48. | ಡಾ: ಅರ್ಪಿತಾ ಪಾವ್ಲೆ, ಡಿಎನ್‌ಬಿ (ಪೀಡಿಯೂ)<br>ನಂ: 10, 3-50, ಎನ್.ವಿ. ಲೇಔಟ್, ವಿಠಲನಗರ,<br>ಗುಲ್ಬರ್ಗಾ ಜಿಲ್ಲೆ-585103. | ಸಾರ್ವಜನಿಕ ಆಸ್ಪತ್ರೆ, ಅಫ್ಜಲ್‌ಪುರ, ಗುಲ್ಬರ್ಗಾ ಜಿಲ್ಲೆ |
| 49. | ಡಾ: ನಾಗಲಕ್ಷ್ಮಿ ಡಿ. ಎನ್.ಗಂಡ: ಪಿ.ಸಿ. ಶ್ರೀಕಾಂತ್,<br>ನಂ: 16, ರವೀಂದ್ರ ನಗರ, ಆದಿಚುಂಚನಗಿರಿ ಕಲ್ಯಾಣ ಮಂಟಪದ ಹಿಂಭಾಗ, ಹಾಸನ ಜಿಲ್ಲೆ-573201. | ಪ್ರಾಥಮಿಕ ಆರೋಗ್ಯ ಘಟಕ, ಹೊನ್ನಾವರ, ಹಾಸನ ತಾಲ್ಲೂಕು |
| 50. | ಡಾ: ರೇಖಾ ಸಿ.<br>ಗಂಡ: ಡಾ: ಎಸ್. ಬಾಲಸುಬ್ರಹ್ಮಣ್ಯ<br>ಲಯನ್ಸ್ ಕಣ್ಣಿನ ಆಸ್ಪತ್ರೆ, ಹೊಳೆನರಸೀಪುರ, ಹಾಸನ ಜಿಲ್ಲೆ. | ಮಹಿಳಾ ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಕತ್ತಹಳ್ಳಿ, ಹಾಸನ ಜಿಲ್ಲೆ |
| 51. | ಡಾ: ಮೀನಾಕ್ಷಿ ಕೆ.ಎಸ್. ತಂದೆ: ಷಡಕಪ್ಪ<br>ಮನೆ ನಂ. 919/2ಎ/63, ಕೆ.ಬಿ.ಎಕ್ಸ್‌ಟೆನ್‌ಶನ್ ದಾವಣಗೆರೆ ಜಿಲ್ಲೆ. | ಪ್ರಾಥಮಿಕ ಆರೋಗ್ಯ ಕೇಂದ್ರ, ನೇರಲಗಿ, ದಾವಣಗೆರೆ ಜಿಲ್ಲೆ. |
| 52. | ಡಾ: ಪದ್ಮಾ ಎ. ಎನ್. DLO/OTO RHINOLARGY/ NGOLLOGY<br>ತಂದೆ: ನಾರಾಯಣಪ್ಪ ಎ.ಡಬ್ಲ್ಯು. 170, ಬಿಇಎಂ.ಎಲ್ ಲೇಔಟ್, 3ನೇ ಹಂತ, 4ನೇ ಬ್ಲಾಕ್, ಸ್ನೇಹಾ ಇಎನ್‌ಟಿ ಆಸ್ಪತ್ರೆ, ಹತ್ತಿರ, ಬಸವೇಶ್ವರ ನಗರ, ಬೆಂಗಳೂರು-79. | ಮಹಿಳಾ ವೈದ್ಯಾಧಿಕಾರಿ, ಹೆಚ್‌ಕೆಕೆ ಆರೋಗ್ಯ ಕೇಂದ್ರ, ಐ.ಪಿ.ಪಿ.8 ದಾವಣಗೆರೆ ಜಿಲ್ಲೆ |
| 53. | ಡಾ: ಬಸ್ತಿ ಸುನೀತಾ ಡಿ. ಡಿಜಿಒ<br>ಗಂಡ: ಡಾ: ಪ್ರಕಾಶ್ ಜೈನ್,<br>ನಂ. 3873 ಶಕ್ತಿಶ್ರೀ ಲಕ್ಷ್ಮೀಶನಗರ, ಕಡೂರು, ಚಿಕ್ಕಮಗಳೂರು ಜಿಲ್ಲೆ-577548 | ಪ್ರಾಥಮಿಕ ಆರೋಗ್ಯ ಕೇಂದ್ರ, ಕೊಪ್ಪ ಚಿಕ್ಕಮಗಳೂರು ಜಿಲ್ಲೆ |
| 54. | ಡಾ: ಸೌಮಿನಿ ಬಿ. ಆರ್. ಡಿಎನ್‌ಬಿ (ಪೀಡಿಯೂ)<br>ನಂ.6, ಶ್ರೀರಂಗ, ಅರ್ಕಾವತಿ ರಸ್ತೆ, ಗೃಹಲಕ್ಷ್ಮಿ ಕಾಲೋನಿ, 1ನೇ ಹಂತ, ಬೆಂಗಳೂರು-79 | ಸಾರ್ವಜನಿಕ ಆಸ್ಪತ್ರೆ, ಜಯನಗರ, ಬೆಂಗಳೂರು |
| 55. | ಡಾ: ವೀಣಾ ಎಸ್. ಕೆಂಚಪ್ಪನವರ್<br>ಕೇ: ಎಸ್.ಡಿ. ಕೆಂಚಪ್ಪನವರ್,<br>ಬನಶಂಕರಿ ಎಕ್ಸ್‌ಟೆನ್‌ಶನ್, ರಾಣೇಬೆನ್ನೂರು, ಹಾವೇರಿ ಜಿಲ್ಲೆ-581115 | ಜಿಲ್ಲಾ ಆಸ್ಪತ್ರೆ, ದಾವಣಗೆರೆ. |
| 56. | ಡಾ: ಶರಣಮ್ಮ ಪಾಟೀಲ್ ಮಹಿಳಾ ವೈದ್ಯಾಧಿಕಾರಿ, ಪ್ರಾ. ಆ. ಕೇಂದ್ರ, ಕಲಾದಗಿ, ಬಾಗಲಕೋಟೆ ಜಿಲ್ಲೆ. | ಜಿಲ್ಲಾ ಆಸ್ಪತ್ರೆ, ಬಾಗಲಕೋಟೆ |
| 57. | ಡಾ: ಪದಗಲ್ ರೋಜಾವತಿ, ಡಿಎಂಸಿಹೆಚ್.<br>'ಸಂಜೀವಶ್ರೀ' 1ನೇ ಮುಖ್ಯ ರಸ್ತೆ ಬಸವೇಶ್ವರ ನಗರ, ಬಳ್ಳಾರಿ ಜಿಲ್ಲೆ-583103 | ಸಾರ್ವಜನಿಕ ಆಸ್ಪತ್ರೆ, ಹೊಸಪೇಟೆ ಬಳ್ಳಾರಿ ಜಿಲ್ಲೆ. |

**ಕಾಶೀನಾಥ ಪಟವಾಡಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

ಪಿ.ಆರ್. 135